# ಪರಿಸರ ಅಧ್ಯಯನಗಳು

## ಪರಿಸರ ಅಧ್ಯಯನಗಳು
## 3ನೇ ತರಗತಿಯಿಂದ ಐದನೇ ತರಗತಿಯವರೆಗೆ

## ಪ್ರವೇಶಿಕೆ: ಪರಿಸರ ಅಧ್ಯಯನಗಳ ಬೋಧನೆ

1975ರಲ್ಲಿ ರಾಷ್ಟ್ರೀಯ ಪಠ್ಯಕ್ರಮ ಸಮಿತಿಯು "ಹತ್ತು ವರ್ಷದ-ಶಾಲೆಗೆ ಪಠ್ಯಕ್ರಮ: ಒಂದು ಚೌಕಟ್ಟು" ಎನ್ನುವ ತನ್ನ 1975ರ ನೀತಿ ನಿರೂಪಣಾ ದಾಖಲೆಯಲ್ಲಿ ಪ್ರಾಥಮಿಕ ಹಂತದಲ್ಲಿ 'ಪರಿಸರ ಅಧ್ಯಯನಗಳು' ಎನ್ನುವ ಏಕೈಕ ವಿಷಯವನ್ನು ಬೋಧಿಸಬೇಕು ಎಂದು ಶಿಫಾರಸು ಮಾಡಿತು. ಪರಿಸರ ಅಧ್ಯಯನವು ಮೊದಲ ಎರಡು ವರ್ಷಗಳಲ್ಲಿ (ತರಗತಿ 1 ಮತ್ತು 2) ನೈಸರ್ಗಿಕ ಹಾಗೂ ಸಾಮಾಜಿಕ ಪರಿಸರಗಳೆರಡನ್ನೂ ಒಳಗೊಳ್ಳುವುದಾದರೆ ತರಗತಿ 3 ರಿಂದ 5 ರವರೆಗೆ ಸಾಮಾಜಿಕ ಅಧ್ಯಯನಗಳು ಮತ್ತು ಸಾಮಾನ್ಯ ವಿಜ್ಞಾನಗಳೆಂಬ ಪ್ರತ್ಯೇಕ ಭಾಗಗಳಿದ್ದು ಅವುಗಳನ್ನು ಇವಿಎಸ್ ಭಾಗ 1 ಮತ್ತು ಭಾಗ 2 ಎಂದು ಕರೆಯಲಾಗುವುದು ಎಂದು ಅದು ಪ್ರಸ್ತಾಪಿಸಿತ್ತು. ಪ್ರಾಥಮಿಕ ಹಂತದಲ್ಲಿ ಪರಿಸರ ಅಧ್ಯಯನಗಳ ಬೋಧನೆಗೆ ಸಂಬಂಧಿಸಿದಂತೆ ರಾಷ್ಟ್ರೀಯ ಶಿಕ್ಷಣ ನೀತಿ 1986 ಹಾಗೂ ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟೂ (NCF (ಎನ್ ಸಿ ಎಫ್)) 1988 ಕೂಡ ಅದೇ ವಿಧಾನವನ್ನು ಮುಂದಿಟ್ಟವು. ಮಕ್ಕಳು ತಮ್ಮ ಸುತ್ತಮುತ್ತಲಿನ ಜಗತ್ತನ್ನು ಹೇಗೆ ಗ್ರಹಿಸುತ್ತಾರೆ ಮತ್ತು ಪ್ರಾಥಮಿಕ ಶಾಲೆಗಳಲ್ಲಿನ ಬೋಧನಾ ವಿಧಾನವು ಅವರಲ್ಲಿ ಹೇಗೆ ಸಾಮಾಜಿಕ ಮತ್ತು ಪರಿಸರ ಕಾಳಜಿಗಳಿಗೆ ಅನುಗುಣವಾಗಿ ವೈಜ್ಞಾನಿಕ ಸಾಮರ್ಥ್ಯಗಳನ್ನು ಮತ್ತು ಅರ್ಥೈಸುವಿಕೆಯನ್ನು ಬೆಳೆಸಿಕೊಳ್ಳುವಂತೆ ಅನುವು ಮಾಡಿಕೊಡಬಹುದು ಎನ್ನುವುದರ ಕುರಿತು ನಡೆಯುತ್ತಿರುವ ಸಮಕಾಲೀನ ಸಂಶೋಧನೆಯೂ ಸಹ ಈ ಸಮಗ್ರ ರಚನೆಯನ್ನು ಬೆಂಬಲಿಸುತ್ತದೆ. ಇಡೀ ಪ್ರಾಥಮಿಕ ಹಂತದಲ್ಲಿ ಪರಿಸರ ಅಧ್ಯಯನವನ್ನು 3 ರಿಂದ 5 ನೇ ತರಗತಿಯವರೆಗೆ ಸಾಮಾನ್ಯ ವಿಜ್ಞಾನ ಹಾಗೂ ಸಾಮಾಜಿಕ ಅಧ್ಯಯನಗಳು ಎನ್ನುವ ಎರಡು ಪ್ರತ್ಯೇಕ ವಿಭಾಗಗಳ ಬದಲಾಗಿ ಒಂದು ಸಮಗ್ರ ಅಧ್ಯಯನವಾಗಿ ಬೋಧಿಸಬೇಕೆಂದು NCF 2000 ಶಿಫಾರಸ್ಸು ಮಾಡಿತ್ತು. ಈಗಿನ NCF 2005, ಪ್ರಾಥಮಿಕ ಹಂತದಲ್ಲಿ ಪರಿಸರ ಅಧ್ಯಯನಗಳಿಗೆ ಈ ಸಮಗ್ರ ವಿಧಾನವನ್ನು ಮುಂದುವರಿಸಬೇಕೆಂದು ಹಾಗೂ ಮತ್ತಷ್ಟು ಬಲ ಪಡಿಸಬೇಕೆಂದು ಕರೆ ಕೊಟ್ಟಿದೆ.

## NCF 2005 ಮತ್ತು ಪರಿಸರ ಅಧ್ಯಯನಗಳ ಉದ್ದೇಶಗಳು

ಪ್ರಸ್ತುತ ಪಠ್ಯಕ್ರಮವನ್ನು ವಿಜ್ಞಾನಗಳು, ಸಮಾಜ ವಿಜ್ಞಾನಗಳು ಮತ್ತು ಪರಿಸರ ಶಿಕ್ಷಣದಿಂದ ಒಳನೋಟಗಳನ್ನು ಪಡೆದುಕೊಂಡು ಶಾಲಾ ಶಿಕ್ಷಣದ ಪ್ರಾಥಮಿಕ ಹಂತಕ್ಕೆ ಒಂದು ಸಮಗ್ರ ದೃಷ್ಟಿಕೋನವನ್ನು ರೂಪಿಸಲೆಂದು ವಿನ್ಯಾಸಗೊಳಿಸಲಾಗಿದೆ. ವಿಜ್ಞಾನ ಹಾಗೂ ಸಮಾಜ

ವಿಜ್ಞಾನಗಳನ್ನು ಪ್ರಾಥಮಿಕ ಹಂತದಲ್ಲಿ ಬೋಧಿಸುವ ಕೆಲವು ಉದ್ದೇಶಗಳನ್ನು ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟು 2005, ಈ ಕೆಳಗಿನಂತೆ ಸೂಚಿಸುತ್ತದೆ:

- ನೈಸರ್ಗಿಕ. ಸಾಮಾಜಿಕ ಹಾಗೂ ಸಾಂಸ್ಕೃತಿಕ ಪರಿಸರಗಳ ನಡುವಿನ ಸಂಬಂಧಗಳನ್ನು ಮಕ್ಕಳು ಗುರುತಿಸುವಂತೆ ಮತ್ತು ಗ್ರಹಿಸುವಂತೆ ಅವರಿಗೆ ತರಬೇತಿ ನೀಡುವುದು;
- ಅಮೂರ್ತತೆಗಳಿಗೆ ಬದಲಾಗಿ ಬದುಕಿನ ಭೌತಿಕ, ಜೈವಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ಅಂಶಗಳಿಂದ ಮತ್ತು ಬದುಕಿನ ಅನುಭವಗಳಿಂದ ಪಡೆದುಕೊಂಡ ಮತ್ತು ಅವಲೋಕನ ಹಾಗೂ ದೃಷ್ಟಾಂತವನ್ನು ಆಧರಿಸಿದ ಗ್ರಹಿಕೆಯನ್ನು ಬೆಳೆಸುವುದು;
- ಕುಟುಂಬದಿಂದ ಪ್ರಾರಂಭಿಸಿ ನಂತರ ಬೇರೆ ವಿಷಯಗಳಿಗೆ ವಿಸ್ತರಿಸುತ್ತಾ ಮಗುವಿನಲ್ಲಿ ಸಾಮಾಜಿಕ ವಿದ್ಯಮಾನಗಳ ಬಗ್ಗೆ ಕುತೂಹಲವನ್ನು ಹುಟ್ಟಿಸುವ ಸಲುವಾಗಿ ಅದರ ಸಂಜ್ಞಾನಾತ್ಮಕ ಸಾಮರ್ಥ್ಯವನ್ನು ಹಾಗೂ ಸಮಸ್ಯಾ ಪರಿಹಾರ ಸಾಮರ್ಥ್ಯವನ್ನು ಬೆಳೆಸುವುದು;
- ವಿಶೇಷವಾಗಿ ನೈಸರ್ಗಿಕ ಪರಿಸರಕ್ಕೆ (ಹಸ್ತಕೃತಿಗಳು ಹಾಗು ಮನುಷ್ಯರನ್ನು ಒಳಗೊಂಡಂತೆ) ಸಂಬಂಧಿಸಿದಂತೆ ಮಕ್ಕಳಲ್ಲಿ ಕುತೂಹಲವನ್ನು ಮತ್ತು ಸೃಜನಶೀಲತೆಯನ್ನು ಪೋಷಿಸುವುದು;
- ಪರಿಸರದ ವಿಷಯಗಳಿಗೆ ಸಂಬಂಧಿಸಿದಂತೆ ಅರಿವನ್ನು ಬೆಳೆಸುವುದು;
- ಅವಲೋಕನ, ವರ್ಗೀಕರಣ, ಮತ್ತು ತೀರ್ಮಾನಕ್ಕೆ ಬರುವುದು ಇತ್ಯಾದಿಗಳ ಮೂಲಕ ಮೂಲಭೂತ ಸಂಜ್ಞಾನಾತ್ಮಕ ಕೌಶಲ್ಯ ಹಾಗೂ ಮನೋ ಸ್ನಾಯುಚಲನಾ ಕೌಶಲ್ಯಗಳನ್ನು ಮಕ್ಕಳು ಪಡೆದುಕೊಳ್ಳುವಂತೆ ಅವರನ್ನು ಶೋಧನೆಯಲ್ಲಿ ಹಾಗೂ ಅನುಭವಾತ್ಮಕ ಚಟುವಟಿಕೆಗಳಲ್ಲಿ ತೊಡಗಿಕೊಳ್ಳುವಂತೆ ಮಾಡುವುದು;
- ನಂತರದ ಹಂತಗಳಲ್ಲಿ ತಾಂತ್ರಿಕ ಹಾಗೂ ಪರಿಮಾಣಾತ್ಮಕ ಕೌಶಲಗಳ ಬೆಳವಣಿಗೆಗೆ ಪೂರ್ವತಯಾರಿಯಾಗಿ ವಿನ್ಯಾಸ ಹಾಗೂ ನಿರ್ಮಾಣ, ಅಂದಾಜು ಹಾಗೂ ಅಳತೆಗೆ ಒತ್ತು ನೀಡುವುದು.
- ಸಮಾನತೆ ಮತ್ತು ನ್ಯಾಯ, ಮತ್ತು ಮಾನವನ ಘನತೆ ಮತ್ತು ಹಕ್ಕುಗಳನ್ನು ಗೌರವಿಸುವಂತಹ ಮೌಲ್ಯಗಳೊಂದಿಗೆ ಲಿಂಗ ಸಂಬಂಧಿ ಕಾಳಜಿಗಳು ಮತ್ತು ಅಂಚಿಗೆ ನೂಕಲ್ಪಡುವ ಮತ್ತು ಶೋಷಣೆಗಳಂತಹ ವಿಷಯಗಳನ್ನು ವಿಮರ್ಶನಶೀಲರಾಗಿ ಉದ್ದೇಶಿಸಲು ಸಮರ್ಥರಾಗುವಂತೆ ಮಾಡುವುದು.

## ‘ಅಧ್ಯಯನ ವಿಷಯ’ಗಳನ್ನು ಸಮಗ್ರಗೊಳಿಸುವುದೊ ಅಥವಾ ಒಂದು ಹೊಸ ಗ್ರಹಿಕೆಯನ್ನು ರೂಪಸಿಕೊಳ್ಳುವುದೊ?

ಸಾಮಾನ್ಯ ವಿಜ್ಞಾನ ಹಾಗೂ ಸಾಮಾಜಿಕ ವಿಜ್ಞಾನಗಳ ಕುರಿತು ನಾವೇನು ಅರ್ಥ ಮಾಡಿಕೊಳ್ಳುತ್ತೇವೆ? ಶಾಲೆಯಲ್ಲಿ ಈ ‘ಅಧ್ಯಯನ ವಿಷಯ’ಗಳ ಬಗ್ಗೆ ಯೋಚಿಸಿದಾಗೆಲ್ಲಾ ನಾವು ಕೆಲವು ಜ್ಞಾನ ಶಾಖೆಗಳನ್ನು ಮತ್ತು ಅವುಗಳಲ್ಲಿ ಪ್ರತಿಯೊಂದರಲ್ಲೂ ಅಂತರ್ಗತವಾಗಿರುವ ಜ್ಞಾನ ರಚನೆಗಳನ್ನು ಗಳಿಸಿಕೊಳ್ಳುವ ವಿವಿಧ ವಿಧಾನಗಳನ್ನು ಸಹ ನಮ್ಮ ಮನಸ್ಸಿನಲ್ಲಿಟ್ಟುಕೊಂಡಿರುತ್ತೇವೆ. ಶಾಲೆಯ ಈ ಅಧ್ಯಯನ ವಿಷಯಗಳು ತಮ್ಮದೇ ಆದ ಸಂಕೀರ್ಣ ಇತಿಹಾಸಗಳ ಮೂಲಕ ವಿಕಸನಗೊಂಡು ಅವು ಇಂದು ಭೌತವಿಜ್ಞಾನ, ಪ್ರಾಣಿವಿಜ್ಞಾನ, ರಸಾಯನವಿಜ್ಞಾನ, ಅಣು ಜೀವವಿಜ್ಞಾನ, ಇತಿಹಾಸ, ಸಮಾಜಶಾಸ್ತ್ರ,

ಭೂಗೋಳ ಶಾಸ್ತ್ರ, ಅರ್ಥಶಾಸ್ತ್ರ, ರಾಜಕೀಯ ಶಾಸ್ತ್ರ, ಇತ್ಯಾದಿಗಳಂತಹ ತಜ್ಞ ಶಿಸ್ತುಗಳಾಗಿ ವಾಸ್ತವ ಜಗತ್ತಿನಲ್ಲಿ ಅಭ್ಯಾಸ ಮಾಡಲಾಗುವ ವಿಜ್ಞಾನಗಳು ಅಥವಾ ಸಮಾಜ ವಿಜ್ಞಾನಗಳಿಗಿಂತ ವಿಭಿನ್ನವಾಗಿವೆ. ಹಾಗಾಗಿ ತಜ್ಞರುಗಳ ಗುಂಪುಗಳು ಪ್ರಾಥಮಿಕ ಹಂತದಲ್ಲಿ ಏನನ್ನು ಕಲಿಸಬೇಕು ಎಂದು ಚರ್ಚಿಸಲು ಕುಳಿತಾಗ ಏನಾಗುತ್ತದೆ? ಅವರು ಸ್ವಾಭಾವಿಕವಾಗಿಯೆ ತಮ್ಮದೇ ಆದ ಅಧ್ಯಯನ ಶಿಸ್ತುಗಳಿಗೆ ಸಾಂಪ್ರದಾಯಿಕವಾಗಿ ಆಧಾರವಾಗಿರುವ 'ವಿಷಯಗಳ' ಬಗ್ಗೆ ಆಲೋಚಿಸುವ ಪ್ರವೃತ್ತಿಯನ್ನು ತೋರಿಸುತ್ತಾರೆ. ಹೀಗೆ, ಜೀವವಿಜ್ಞಾನಿಗಳು (ಸಸ್ಯವಿಜ್ಞಾನಿಗಳು ಹಾಗು ಪ್ರಾಣಿ ವಿಜ್ಞಾನಿಗಳನ್ನು ನಾವು ಒಟ್ಟಾಗಿ ಸೇರಿಸುವಂತೆ ಈ ಪರಿಭಾಷೆಯನ್ನು ಬಳಸಬಹುದಾದರೆ) ಸ್ವಾಭಾವಿಕವಾಗಿಯೆ ಸಸ್ಯಗಳ, ಪ್ರಾಣಿಗಳ ಅಥವಾ ಮಾನವ ದೇಹದ ಅಧ್ಯಯನದ ಪ್ರಸ್ತಾವವನ್ನು ಮುಂದಿಡುತ್ತಾರೆ, ಹಾಗೆಯೆ ಭೌತವಿಜ್ಞಾನಿಗಳು ಶಬ್ದ, ಬೆಳಕು, ಶಕ್ತಿ ಮತ್ತು ಶ್ರಮದ ಬಗ್ಗೆ ಯೋಚಿಸುತ್ತಾರೆ. ರಸಾಯನವಿಜ್ಞಾನಿಗಳು ವಸ್ತುಗಳ ರೂಪಗಳು, ದ್ರವ್ಯದ ಗುಣಗಳು ಇವುಗಳ ಅಧ್ಯಯನವನ್ನು ಪ್ರಸ್ತಾಪಿಸುತ್ತಾರೆ. ಇದಕ್ಕೆ ಸಮಾಜ ವಿಜ್ಞಾನಗಳ ಗುಂಪಿನಡಿಯಲ್ಲಿ ಬರುವ ವಿವಿಧ ಅಧ್ಯಯನ ಶಿಸ್ತುಗಳನ್ನು ಸೇರಿಸಿದರೆ ನಾವು ಬಹಳ ಬೇಗ 'ಸಮಗ್ರಗೊಳಿಸಲೂ ಆಗದ' ಮತ್ತು ಮಗುವು ತನ್ನ ಜಗತ್ತಿನೊಂದಿಗೆ ಸಂಬಂಧ ಕಲ್ಪಿಸಿಕೊಳ್ಳುವ ರೀತಿಗೆ ಹತ್ತಿರವೂ ಬಾರದ ಗೊಂದಲಮಯ ವಿಷಯಗಳ ರಾಶಿಯನ್ನು ಹೊಂದುತ್ತೇವೆ.

ಹಾಗಾಗಿ, ಸಮಗ್ರ ವಿಧಾನವನ್ನು ಅಳವಡಿಸಿಕೊಂಡಿರುವ ಬಹಳಷ್ಟು ಪ್ರಾಥಮಿಕ ಶಾಲಾ ಪಠ್ಯಕ್ರಮಗಳು ವಿಭಿನ್ನ'ಕಲಿಕಾ ವಿಷಯ' ಗಳಿಂದ 'ವಿಷಯಗಳ' ಪಟ್ಟಿಯನ್ನು ಆಧರಿಸುವುದರೊಂದಿಗೆ ಮುಂದುವರೆಯುವುದರ ಬದಲಾಗಿ ಸಂಬದ್ಧ ಮತ್ತು ಪರಸ್ಪರ ಸಂಬಂಧಿತ ತಿಳುವಳಿಕೆಯನ್ನು ಬೆಳಸಿಕೊಳ್ಳಲು ಅನುವು ಮಾಡಿಕೊಡುವ 'ನಿರೂಪಣಾ ವಿಷಯ'ಗಳನ್ನು ಪ್ರಸ್ತಾಪಿಸುತ್ತವೆ. ಇದು ಅಧ್ಯಯನ ಶಿಸ್ತುಗಳ ಸಾಂಪ್ರದಾಯಿಕ ಗಡಿಗಳನ್ನು ಮೀರಿದ ಮತ್ತು ಆದ್ಯತೆಗಳನ್ನು ಪರಸ್ಪರ ಹಂಚಿಕೊಂಡದ್ದವುಗಳನ್ನಾಗಿ ನೋಡುವುದನ್ನು ಬೇಡುತ್ತದೆ. ಪ್ರಸ್ತುತ ಪಠ್ಯಕ್ರಮದಲ್ಲಿ ಈ ವಿಧಾನವನ್ನು ಅನುಸರಿಸಲಾಗಿದೆ. ಪ್ರತಿಯೊಂದು ಶಿಸ್ತೂ ನೀಡುವ ಸಾಧ್ಯತೆಗಳನ್ನು ಪರಿಗಣಿಸಲು, ಮೂಲಭೂತವಾಗಿ ಮಗು ಕೇಂದ್ರಿತವಾದ ಮತ್ತು ಪರಸ್ಪರಸಂಬಂಧ ಹೊಂದುವಂತಹ ರೀತಿಯಲ್ಲಿ ವಿವಿಧ ಅಧ್ಯಯನ ಶಿಸ್ತುಗಳಿಂದ ಒಳನೋಟಗಳನ್ನು ಒಟ್ಟಾಗಿ ತರಲು, ಹಲವಾರು ನಿರೂಪಣಾ ವಿಷಯಗಳನ್ನು ಚರ್ಚಿಸಲಾಯಿತು. ಪ್ರಾಥಮಿಕ ವರ್ಷಗಳುದ್ದಕ್ಕೂ ಹೇಗೆ ಪರಿಕಲ್ಪನೆ ಹಾಗೂ ಕೌಶಲಗಳ ನಡುವೆ ಸಂಬಂಧವಿರುವಂತಹ ಜಾಲವೊಂದನ್ನು ಅಭಿವೃದ್ಧಿಪಡಿಸಬಹುದು ಎಂಬುದನ್ನು ಕಂಡುಕೊಳ್ಳಲು ಪ್ರತಿಯೊಂದು ನಿರೂಪಣಾ ವಿಷಯಕ್ಕೂ ಅಂತಹದೊಂದು ಜಾಲವನ್ನು ರೂಪಿಸಲಾಯಿತು. ಹಲವಾರು ವಿಭಿನ್ನ ವಿಜ್ಞಾನಗಳ ಶಿಸ್ತುಗಳು, ಸಮಾಜ ವಿಜ್ಞಾನ, ಬೋಧನಾವಿಧಾನ, ಲಿಂಗಾಧಾರಿತ ಅಧ್ಯಯನಗಳು, ಮಕ್ಕಳ ಬೆಳವಣಿಗೆ, ಪಠ್ಯಕ್ರಮ ಅಧ್ಯಯನಗಳು ಇತ್ಯಾದಿಗಳಿಗೆ ಸೇರಿದ ವಿವಿಧ ತಜ್ಞರುಗಳು ಪ್ರಸ್ತಾಪಿತ ನಿರೂಪಣಾ ವಿಷಯಗಳ ಸಾಧ್ಯತೆಗಳನ್ನು ಚರ್ಚಿಸಿದರು, ಅವುಗಳಲ್ಲಿನ ಅಪೂರ್ಣತೆಗಳನ್ನು ತೋರಿಸಿದರು, ಮತ್ತು ಮಗು ಕೇಂದ್ರಿತ ವಿಧಾನಕ್ಕೆ ಇರಬೇಕಾದ ಆದ್ಯತೆಗಳ ಬಗ್ಗೆ ಚರ್ಚಿಸಿದರು. ಪ್ರಾಥಮಿಕ ಶಾಲೆಗೆ ಸಂಬಂಧಿಸಿದಂತೆ ಅನನ್ಯ ಮತ್ತು ತೃಪ್ತಿಕರವಾದಂತಹ ವಿಚಾರಗಳ ವಿಶದೀಕರಣವನ್ನು ಒದಗಿಸುವ ಯಾವುದೇ ಏಕೈಕ ಸ್ವರೂಪವಿಲ್ಲ ಎನ್ನುವುದು ಸ್ಪಷ್ಟವಾಗಿದೆ ಮತ್ತು ಈ ಪಠ್ಯಕ್ರಮವೂ ಕೂಡ ಅಂತಹ ಯಾವುದೇ ಹೆಗ್ಗಳಿಕೆಯನ್ನು ಮುಂದಿಡುತ್ತಿಲ್ಲ.

ಇದೊಂದು ಕಟ್ಟಳೆಯ ಸ್ವರೂಪದ್ದಾಗಿರದೆ ಸೂಚಕದ್ದಾಗಿದ್ದು ಅದು ಪ್ರಮುಖ ನಿರೂಪಣಾ ವಿಷಯಗಳು ಮತ್ತು ಉಪ ನಿರೂಪಣಾ ವಿಷಯಗಳನ್ನು ಅವುಗಳ ಸಂಬಂಧಗಳ

ಸಾಧ್ಯತೆಗಳೊಂದಿಗೆ ಸೂಚಿಸುತ್ತದೆ. ಮಗುವಿನ ಆಲೋಚನೆಯನ್ನು ಹೊಸ ದಿಕ್ಕಿನಲ್ಲಿ ಕೊಂಡೊಯ್ಯುವ ಮತ್ತು ಅದರ ಕಲಿಕಾ ಪ್ರಕ್ರಿಯೆಯನ್ನು ಬೆಂಬಲಿಸುವ ಇದು, ಪ್ರಜ್ಞಾಪೂರ್ವಕವಾಗಿ ಪ್ರಮುಖ ಪರಿಕಲ್ಪನೆಗಳೊಂದಿಗೆ ಪ್ರಾರಂಭವಾಗದೆ *ಪ್ರಮುಖ ಪ್ರಶ್ನೆ* ಗಳೊಂದಿಗೆ ಪ್ರಾರಂಭವಾಗುತ್ತದೆ. ಈ ಸ್ವರೂಪವು ಪಠ್ಯ ಪುಸ್ತಕಗಳನ್ನು ಬರೆಯುವವರಿಗೆ, ಶಿಕ್ಷಕರಿಗೆ ಮತ್ತು ಪೋಷಕರಿಗೆ ಇದರಲ್ಲಿರುವ ಅಪಾರ ಸಾಧ್ಯತೆಗಳನ್ನು ಮತ್ತು ಮಕ್ಕಳ ಗ್ರಹಿಕೆಯ ಆಳವನ್ನು ಅರ್ಥಮಾಡಿಕೊಳ್ಳಲು ನೆರವಾಗಬೇಕು ಎನ್ನುವ ಉದ್ದೇಶವನ್ನು ಹೊಂದಿದೆ. ಸಾಮಾನ್ಯವಾಗಿ ಆಗುವಂತೆ ಅರ್ಥ ಮಾಡಿಕೊಳ್ಳಲಾಗದ ಮಾಹಿತಿಗಳನ್ನು ನೆನಪಿಟ್ಟುಕೊಳ್ಳುವಂತೆ ಮಕ್ಕಳ ಮೇಲೆ ಒತ್ತಡ ಹೇರುವ ಮೂಲಕ ಅವರ ಕಲಿಕೆಯನ್ನು ಸೀಮಿತಗೊಳಿಸದೆ ಅಥವಾ ಅವರ ಉತ್ಸಾಹವನ್ನು ಹೊಸಕಿ ಹಾಕದೆ ದೊಡ್ಡವರು ಮಕ್ಕಳ ಕಲಿಕೆಯನ್ನು ಹೇಗೆ ಪ್ರಚೋದಿಸಬಹುದು ಮತ್ತು ಸಕ್ರಿಯವಾಗಿ ಬೆಂಬಲಿಸಬಹುದು ಎನ್ನುವುದನ್ನೂ ಕೂಡ ಇದು ಸೂಚಿಸುತ್ತದೆ.



## ಮಗು ಕೇಂದ್ರಿತ ಮತ್ತು ಸಮಗ್ರ ವಿಧಾನಕ್ಕಿರುವ ನಿರೂಪಣಾ ವಿಷಯಗಳು

ಸಾಮಾಜಿಕ ಅಧ್ಯಯನಗಳು, ವಿಜ್ಞಾನಗಳು ಮತ್ತು ಪರಿಸರ ಶಿಕ್ಷಣದಲ್ಲಿ ಚರ್ಚಾಂಶಗಳ ನಡುವೆ ಸಾಮಾನ್ಯ ಪರಸ್ಪರ ಸಂಬಂಧವನ್ನು ಸಾಧ್ಯ ಮಾಡುವ ಮಗು ಕೇಂದ್ರಿತ ದೃಷ್ಟಿಕೋನದ ಚೌಕಟ್ಟಿನಲ್ಲಿ ಬರುವ ನಿರೂಪಣಾ ವಿಷಯಗಳೊಂದಿಗೆ ಈ ಪಠ್ಯಕ್ರಮದ ಜಾಲವನ್ನು ಅಭಿವೃದ್ಧಿಪಡಿಸಲಾಗಿದೆ. 3 ರಿಂದ 5ನೇ ತರಗತಿಗಳವರೆಗಿನ ಪಠ್ಯಕ್ರಮವನ್ನು ಈ ಕೆಳಗಿನಂತೆ ಆರು ಸಾಮಾನ್ಯವಾದ ನಿರೂಪಣಾ ವಿಷಯಗಳ ಸುತ್ತಲೂ ಹೆಣೆಯಲಾಗಿದೆ; 'ಕುಟುಂಬ ಮತ್ತು ಸ್ನೇಹಿತರು' ಎನ್ನುವ ಪ್ರಧಾನ ನಿರೂಪಣಾ ವಿಷಯವು ನಾಲ್ಕು ಉಪ ನಿರೂಪಣಾ ವಿಷಯಗಳನ್ನು ಒಳಗೊಂಡಿದೆ:

1. ಕುಟುಂಬ ಮತ್ತು ಸ್ನೇಹಿತರು:
    1.1 ಸಂಬಂಧಗಳು; 1.2 ಕೆಲಸ ಮತ್ತು ಆಟ;
    1.3 ಪ್ರಾಣಿಗಳು; 1.4 ಗಿಡಗಳು
2. ಆಹಾರ;
3. ವಸತಿ;
4. ನೀರು;
5. ಪ್ರಯಾಣ;
6. ನಾವು ಸೃಷ್ಟಿಸುವ ಮತ್ತು ಮಾಡುವ ಸಂಗತಿಗಳು

ಪಠ್ಯಕ್ರಮದ ಜಾಲವು ಮೂರು ವರ್ಷಗಳ ಕಾಲ ಬಾಹ್ಯ ಸಂಗತಿಗಳತ್ತ ಗಮನ ಹರಿಸುತ್ತದೆ; ಇದು ಮಗುವಿನ ತಕ್ಷಣದ ಕುಟುಂಬ, ನೆರೆಹೊರೆ, ಸುತ್ತಮುತ್ತಲ ಜಾಗ ಮತ್ತು ದೇಶವನ್ನೂ ಕೂಡ ಒಳಗೊಂಡ 'ನಾನು ' ಎಂಬುದರಿಂದ ಪ್ರಾರಂಭವಾಗಿ ಕ್ರಮೇಣವಾಗಿ ಮಗುವಿಗೆ ತನ್ನ ಜಗತ್ತಿನ ಬಗ್ಗೆ ಇರುವ ಗ್ರಹಿಕೆಯನ್ನು ವಿಸ್ತರಿಸುತ್ತದೆ. ಹಾಗಾಗಿ ಮಗುವು 5ನೇ ತರಗತಿಗೆ ಬರುವ ಹೊತ್ತಿಗೆ ಅದು 'ನಾನು' ಎಂಬುದನ್ನು ಒಂದು ವಿಶಾಲವಾದ ಸಂದರ್ಭದಲ್ಲಿ - ಒಂದು ಸಮುದಾಯದ, ದೇಶದ, ಮತ್ತು ಸೂಕ್ಷ್ಮವಾಗಿ ಈ ಜಗತ್ತಿನಲ್ಲಿ

ನೆಲೆಗೊಂಡ ಒಂದು ಭಾಗವಾಗಿ - ನೋಡುವ ಸಾಮರ್ಥ್ಯವನ್ನು ಪಡೆದುಕೊಳ್ಳುತ್ತದೆ. ನಿಜಕ್ಕೂ, ಪಠ್ಯಕ್ರಮವು ಸಣ್ಣ ಮಗುವನ್ನು ಇನ್ನೂ ಅದರ ಗ್ರಹಿಕೆಗೆ ನಿಲುಕದಿದ್ದರೂ ಅದರ ಪಾಲಿಗೆ ಅತ್ಯಂತ ಚಿತ್ತಾಕರ್ಷಕವಾದ ಬಾಹ್ಯಾಕಾಶನೌಕೆಯಲ್ಲಿ ಸವಾರಿ ಮಾಡಿ ಭೂಮಿಯ ಎಲ್ಲೆಯನ್ನೂ ಮೀರಿ ಬಾಹ್ಯಾಕಾಶಕ್ಕೆ ಜಿಗಿಯಲು ಅದನ್ನು ಪ್ರೇರೇಪಿಸುವಂತಹ ಕೆಲವು ಕಲ್ಪನಾ ಲೋಕಕ್ಕೆ ಕೊಂಡೊಯ್ಯುವ ಅನುಭವವನ್ನು ಒದಗಿಸುತ್ತದೆ.

ಹೀಗೆ, ಉದಾಹರಣೆಗೆ, 3ನೇ ತರಗತಿಯಲ್ಲಿ ಪ್ರಾರಂಭವಾಗುವ '**ಆಹಾರ**' ನಿರೂಪಣಾ ವಿಷಯವು **'ಅಡುಗೆ', 'ಕುಟುಂಬದಲ್ಲಿ ಸೇವಿಸುವುದು,'** ನಾವೇನು ತಿನ್ನುತ್ತೇವೆ, ಇತರರು ಏನು ತಿನ್ನುತ್ತಾರೆ, ಪ್ರಾಣಿಗಳು ಏನನ್ನು ತಿನ್ನುತ್ತವೆ ಇತ್ಯಾದಿಯಿಂದ ಪ್ರಾರಂಭವಾಗುತ್ತದೆ. ಅದು ನಂತರ 4ನೇ ತರಗತಿಯಲ್ಲಿ ಆಹಾರವನ್ನು ಹೇಗೆ ಬೆಳೆಯಲಾಗುತ್ತದೆ, ಅವರು ನೋಡಿರಬಹುದಾದ ವಿವಿಧ ಸಸ್ಯಗಳಾವುವು, ಆಹಾರವು ನಮಗೆ ಹೇಗೆ ಬರುತ್ತದೆ ಇತ್ಯಾದಿ ವಿಷಯಗಳತ್ತ ಸಾಗುತ್ತದೆ. 5ನೇ ತರಗತಿಯಲ್ಲಿ ನಾವೇ ಸ್ವತಃ ಅನುಭವಿಸುವ ಹಸಿವು ಅಥವಾ ಆಹಾರವೇ ಸಿಗದಿರುವ ಜನರ ಸ್ಥಿತಿಗತಿಯ ವಾಸ್ತವವನ್ನು ಗಮನದಲ್ಲಿಟ್ಟುಕೊಂಡು ಮಕ್ಕಳು ಅದನ್ನು ಯಾರು ಬೆಳೆಯುತ್ತಾರೆ ಮತ್ತು ರೈತರು ಎದುರಿಸುವ ಕಷ್ಟಗಳ ಬಗ್ಗೆ ಚರ್ಚಿಸುತ್ತಾರೆ. ಇದರ ಜೊತೆಗೆ **'ಆಹಾರವು ಯಾವಾಗ ಕೆಟ್ಟುಹೋಗುತ್ತದೆ'** ಎನ್ನುವ ವಿಷಯವು ಆಹಾರದ ಕೆಡುವಿಕೆ ಮತ್ತು ಅದನ್ನು ಕಾಪಾಡುವುದರ ಬಗ್ಗೆ ಪರಿಶೋಧಿಸುತ್ತದೆ. ಅದೇ ಸಮಯದಲ್ಲಿ ಆಹಾರಾಭ್ಯಾಸ ಹಾಗೂ ಬೆಳೆಗಳ ಕೃಷಿಯಲ್ಲಿನ ಬದಲಾವಣೆಗಳನ್ನು ಹಿರಿಯರ/ಅಜ್ಜ ಅಜ್ಜಿಯರ ಅನುಭವಗಳ ಮೂಲಕ ವಿಶ್ಲೇಷಿಸಲಾಗುತ್ತದೆ. ಅಂತಿಮವಾಗಿ, **'ನಮ್ಮ ಬಾಯಿ-ಆಹಾರದ ರುಚಿ ನೋಡುತ್ತದೆ ಮತ್ತು ಜೀರ್ಣಿಸುತ್ತದೆ'** ಎನ್ನುವ ವಿಷಯವು ಆಹಾರವನ್ನು ಜಗಿಯುವಾಗ ಲಾಲಾರಸವು ಅದನ್ನು ಹೇಗೆ ಸಿಹಿಗೊಳಿಸುತ್ತದೆ ಎನ್ನುವುದನ್ನು ಗಮನಿಸಿದರೆ, **'ಸಸ್ಯಗಳಿಗೆ ಆಹಾರ?'**ಎಂಬ ಭಾಗವು ಕೀಟಗಳನ್ನು ತಿನ್ನುವ ಕೆಲವು ಕುತೂಹಲಕಾರಿ ಸಸ್ಯಗಳಂತಹ ವಿಷಯವನ್ನು ಸಹ ಪರಿಚಯಿಸುತ್ತದೆ.

**'ಪ್ರಯಾಣ'** ಎನ್ನುವ ನಿರೂಪಣಾ ವಿಷಯವು ವಿಸ್ತರಿಸುತ್ತಲೇ ಹೋಗುವ ಸಾಮಾಜಿಕ ಹಾಗೂ ಭೌತಿಕ ಪರಿಸರದ ಹೊಸತಾದ ಮತ್ತು ಪರಿಚಿತವಲ್ಲದ ಆದರೆ ಅಷ್ಟೇ ಚಿತ್ತಾಕರ್ಷಕವಾದ ವೈವಿಧ್ಯಮಯ ವಿಚಾರಗಳನ್ನು ಅನ್ವೇಷಿಸುವ ಚಿಂತನೆಗಳ ಪಯಣದಲ್ಲಿ ಸಾಗಲು ಮಗುವಿಗೆ ಸಹಾಯವಾಗಲೆಂದು ಅಭಿವೃದ್ಧಿಪಡಿಸಲಾಯಿತು. 3ನೇ ತರಗತಿಯಲ್ಲಿ ನಿರೂಪಣಾ ವಿಷಯವು ಮಗುವಿಗೆ ತನ್ನದೇ ಆದ ಪ್ರಯಾಣದತ್ತ- ಪ್ರಯಾಣಿಸಿದ್ದರೆ- ನೋಡಿಕೊಳ್ಳುವಂತೆ ಮಾಡುತ್ತದೆ ಮತ್ತು ಇಂದಿನ ಕಾಲದಲ್ಲಿ ಜನರು ಮರಳುಗಾಡಿನಲ್ಲಿ, ಅರಣ್ಯದಲ್ಲಿ, ಗುಡ್ಡ ಬೆಟ್ಟಗಳಲ್ಲಿ ಅಥವಾ ದೊಡ್ಡ ನಗರಗಳಲ್ಲಿ ಪ್ರಯಾಣಿಸುವ ಆಖ್ಯಾನಗಳನ್ನೂ ಕೂಡ ಮಕ್ಕಳು ಕೇಳಿಸಿಕೊಳ್ಳುವುದರಿಂದ ಅವರ ಕುಟುಂಬದಲ್ಲಿರುವ ಹಿರಿಯರು ಹಿಂದಿನ ಕಾಲದಲ್ಲಿ ಹೇಗೆ ಪ್ರಯಾಣ ಮಾಡಿರಬಹುದು ಎನ್ನುವುದನ್ನು ತಿಳಿಯಲು ಪ್ರೋತ್ಸಾಹಿಸುತ್ತದೆ. ಅಷ್ಟೇ ಅಲ್ಲದೆ ವಲಸೆ ಬಂದ ಕುಟುಂಬದಿಂದ ಬಂದಂತಹ ಮಗುವಿನ ಅನುಭವಗಳನ್ನು ಮತ್ತು ಶಾಲಾಶಿಕ್ಷಣದ ಪ್ರಕ್ರಿಯೆಯಲ್ಲಿ ಅದು ಎದುರಿಸುವ ಸಮಸ್ಯೆಗಳನ್ನು ತರಗತಿಗೆ ಪರಿಚಯಿಸಲು ಇದು ಒಂದು ಕತೆಯನ್ನು 'ಸಂಪನ್ಮೂಲ' ವನ್ನಾಗಿ ಪರಿವರ್ತಿಸಲು ಸಹ ಸೂಚಿಸುತ್ತದೆ. 'ಸಂಪನ್ಮೂಲ'ಗಳೆಂದು ಸೂಚಿಸಲಾದ ಅಂತಹ ಕಥನಗಳು ತಮಗಿಂತ ವಿಭಿನ್ನವಾಗಿರುವ ಆದರೆ ಅವರೊಂದಿಗೆ ತಮ್ಮನ್ನು ಯಾವುದೋ ಒಂದು ಬಗೆಯಲ್ಲಿ ಗುರುತಿಸಿಕೊಳ್ಳುವ ರೀತಿಯಲ್ಲಿ ಇತರ ಮಕ್ಕಳ/ಜನರ ಅನುಭವಗಳನ್ನು ತರಗತಿಯಲ್ಲಿ ಹಂಚಿಕೊಳ್ಳಲು ಸೃಜನಶೀಲ ಅವಕಾಶಗಳನ್ನು ಒದಗಿಸುವ ಉದ್ದೇಶವನ್ನು ಹೊಂದಿದೆ. ಇದನ್ನು ಕತೆಗಳ, ಭಿತ್ತಿಚಿತ್ರಗಳ, ನಾಟಕಗಳ, ಸಿನಿಮಾಗಳ, ಮತ್ತು ಇತರ ಮಾಧ್ಯಮಗಳ ಮೂಲಕ

ಮಾಡಬಹುದು. 5ನೇ ತರಗತಿಯಲ್ಲಿ 'ಪ್ರಯಾಣ'ವು ಮಕ್ಕಳನ್ನು ಬಹುಶಃ ಅತ್ಯಂತ ಕ್ಲಿಷ್ಟಕರವಾದ ಪರ್ವತಾರೋಹಣದ ನಂತರ ರಾಷ್ಟ್ರ ಧ್ವಜವನ್ನು ನೆಟ್ಟ ಬಚ್ಚೇಂದ್ರಿ ಪಾಲ್ ರವರ ಕತೆಯೊಂದಿಗೆ ಹಿಮಾಲಯದ ' **ಒರಟಾದ ಹಾಗೂ ಕಠಿಣವಾದ**'(ದುರ್ಗಮವಾದ) ಭೂ ಪ್ರದೇಶಕ್ಕೆ ಕರೆದುಕೊಂಡು ಹೋಗುತ್ತದೆ. ಅದೇ ಸಮಯದಲ್ಲಿ ಮಕ್ಕಳು ತಮ್ಮದೇ ಶಾಲೆಗೆ ಒಂದು ಧ್ವಜವನ್ನು ವಿನ್ಯಾಸಗೊಳಿಸುವಂತೆ ಅವರನ್ನು ಪ್ರೋತ್ಸಾಹಿಸಬಹುದು.

ಈ ನಿರೂಪಣಾ ವಿಷಯವು ಅವರು ಮೊದಲ ಬಾರಿಗೆ ಭೂಮಿಯನ್ನು ಅಂತರಿಕ್ಷದಿಂದ ವೀಕ್ಷಣೆ ಮಾಡಬಹುದಾದ **'ಬಾಹ್ಯಾಕಾಶ ನೌಕೆಯಲ್ಲಿ ಸವಾರಿ'**ಯ ಮೂಲಕ ಬಾಹ್ಯಾಕಾಶಕ್ಕೆ ಕರೆದೊಯ್ಯುತ್ತದೆ ಮತ್ತು ಒಬ್ಬ ರಾಖೇಶ್ ಶರ್ಮಾ ಅಥವಾ ಒಬ್ಬ ಕಲ್ಪನಾ ಚಾವ್ಲಾ ಅವರಿಗೆ ಯಾವ ರೀತಿಯಲ್ಲೂ ಕಡಮೆ ಇಲ್ಲದಂತೆ ಪ್ರತಿಯೊಂದು ಮಗುವು ತಮಗೆ ಅಲ್ಲಿಂದ ಏನು ಕಾಣಿಸುತ್ತಿದೆ ಎನ್ನುವ ಕುರಿತು ಭಾರತದ ಪ್ರಧಾನ ಮಂತ್ರಿಗಳಿಗೆ ಸಂದರ್ಶನ ನೀಡುವಂತೆ ಮಾಡುತ್ತದೆ. ಅಂತರಿಕ್ಷ ವೀಕ್ಷಣೆ ಮಾಡುವ ಪ್ರಯೋಗವನ್ನು ವಿವಿಧ ದೃಷ್ಟಿಕೋನಗಳು ಪರಿಚಯವಾಗುವ ರೀತಿಯಲ್ಲಿ ಶಾಲೆಗಳ ವಿಭಿನ್ನ ದೃಷ್ಟಿಕೋನಗಳ ಮುಖಾಂತರ ಅಭಿವೃದ್ಧಿಪಡಿಸಲಾಗಿದೆ. ಇದು ಅವರಿಗೆ 3ನೇ ತರಗತಿಯಲ್ಲಿ ಅವರ ತರಗತಿಯ ಎರಡು-ಆಯಾಮಗಳ ಒಂದು ಮೂಲ ಚಿತ್ರಣದ ಮೂಲಕ ಪ್ರಾರಂಭವಾಗುವ ನಕ್ಷ ರಚನೆ ಪರಿಕಲ್ಪನೆಯೊಂದಿಗೆ ಸಂಬಂಧ ಹೊಂದಿದ್ದು, ನಂತರ ಅವರು 5ನೇ ತರಗತಿಗೆ ಬರುವ ಹೊತ್ತಿಗೆ ಅವರಿರುವ ಪ್ರದೇಶದ ಅಥವಾ ನಗರದ ಅಂತರಿಕ್ಷ ನೋಟಗಳನ್ನು ಸರಳವಾಗಿ ಓದಲು ಹಾಗೂ ಚಿತ್ರಿಸಲು ಅವರಿಗೆ ಸಾಧ್ಯವಾಗುತ್ತದೆ.

## 'ಕುಟುಂಬ ಮತ್ತು ಸ್ನೇಹಿತರು' ಎಂಬ ನಿರೂಪಣಾ ವಿಷಯದ ಭಾಗವಾಗಿ 'ಸಸ್ಯಗಳು' ಮತ್ತು 'ಪ್ರಾಣಿಗಳು'

ಮಾನವರು ಹೇಗೆ ಅವುಗಳೊಂದಿಗೆ ನಿಕಟ ಸಂಬಂಧವನ್ನು ಹೊಂದಿದ್ದಾರೆ ಎಂಬುದನ್ನು ಸ್ಪಷ್ಟ ಪಡಿಸಲು 'ಸಸ್ಯಗಳು' ಮತ್ತು 'ಪ್ರಾಣಿಗಳು' ಎಂಬ ವಿಷಯವನ್ನು 'ಕುಟುಂಬ ಮತ್ತು ಸ್ನೇಹಿತರು' ಎಂಬ ನಿರೂಪಣಾ ವಿಷಯದಲ್ಲಿ ಪ್ರಜ್ಞಾಪೂರ್ವಕವಾಗಿ ಸೇರಿಸಲಾಗಿದೆ. ಅಲ್ಲದೆ ಇದು ಅದರ ಅಧ್ಯಯನಕ್ಕೆ ಒಂದು ಪರಿಪೂರ್ಣ ಮತ್ತು ಸಮಗ್ರವಾದ ವೈಜ್ಞಾನಿಕ ಹಾಗೂ ಸಾಮಾಜಿಕ ದೃಷ್ಟಿಕೋನವನ್ನು ಕೊಡಲೆಂದು ಸೇರಿಸಲಾಗಿದೆ. ಕೇವಲ ವೈಜ್ಞಾನಿಕ ದೃಷ್ಟಿಕೋನದಿಂದ ನೋಡಿದಾಗ ಸಾಂಪ್ರದಾಯಿಕವಾಗಿ 'ಸಸ್ಯಗಳು' ಮತ್ತು 'ಪ್ರಾಣಿಗಳು' ಒಂದು ಸ್ವಾಯತ್ತ ವರ್ಗೀಕರಣಗಳಾಗಿ ಮಂಡಿಸಲಾಗಿವೆ. ಅವುಗಳನ್ನು ಒಂದು ಸಾಮಾಜಿಕ ಹಾಗೂ ಸಾಂಸ್ಕೃತಿಕ ಸಂದರ್ಭದ್ದಲಿಟ್ಟು ನೋಡುವ ಮತ್ತು ಗುಜ್ಜಾರ್, ಮುಷಾಹರ್, ಅಥವಾ 'ಪಟ್ಟಲ್' ಮಾಡುವಂತಹ (pattal-makers – ಎಲೆಗಳಿಂದ ದೊನ್ನೆ, ತಟ್ಟೆ ಇತ್ಯಾದಿಗಳನ್ನು ತಯಾರಿಸುವವರು) ಕೆಲವು ಸಮುದಾಯಗಳ ಜೀವನ ಮತ್ತು ಜೀವನೋಪಾಯಗಳು ಹೇಗೆ ನಿರ್ದಿಷ್ಟ ಪ್ರಾಣಿಗಳ ಅಥವಾ ಸಸ್ಯಗಳ ಜೊತೆ ನಿಕಟ ಸಂಬಂಧವನ್ನು ಹೊಂದಿವೆ ಎಂದು ನೋಡುವ ಪ್ರಯತ್ನವನ್ನೂ ಸಹ ಇಲ್ಲಿ ಮಾಡಲಾಗಿದೆ. ಅಷ್ಟೇ ಅಲ್ಲದೆ ಮಕ್ಕಳ ಜಗತ್ತಿನಲ್ಲಿ ಪ್ರಾಣಿಗಳು ಮತ್ತು ಸಸ್ಯಗಳ ಕಥನಗಳು ಬಹಳ ಮಹತ್ವದ ಪಾತ್ರವನ್ನು ವಹಿಸುತ್ತವೆ ಮತ್ತು 'ಕುಟುಂಬ ಮತ್ತು ಸ್ನೇಹಿತರು' ಎಂದು ಗ್ರಹಿಸಲ್ಪಟ್ಟ ಚಿತ್ರಾಧಾರಿತ ಪಾತ್ರಗಳ ನಿರೂಪಣೆಗಳೊಂದಿಗೂ ಸಹ ಅವರು ತಮ್ಮನ್ನು ಚೆನ್ನಾಗಿ ಗುರುತಿಸಿಕೊಳ್ಳುತ್ತಾರೆ.

'ಸಸ್ಯಗಳು', 'ಪ್ರಾಣಿಗಳು', 'ಆಹಾರ', ಅಥವಾ, 'ನಮ್ಮ ದೇಹ' ಮುಂತಾದ ಪರಿಕಲ್ಪನೆಗಳನ್ನು ಸಾಂಪ್ರದಾಯಿಕ ವೈಜ್ಞಾನಿಕ ಶಿಸ್ತುಗಳ ಆಧ್ಯಯನಗಳ ಗಡಿಗಳನ್ನೂ ಮೀರಿ ಮಕ್ಕಳ ದೃಷ್ಟಿಕೋನದಿಂದ ಬೇರೆಯದೇ ರೀತಿಯಲ್ಲಿ ನೋಡುವ ಪ್ರಯತ್ನವು ಸವಾಲಿನದ್ದೇ ಆಗಿದೆ. ವಾಸ್ತವದಲ್ಲಿ ಕೆಲವು ವೈಜ್ಞಾನಿಕ ವರ್ಗೀಕರಣಗಳು ತುಂಬಾ ಔಪಚಾರಿಕವಾಗಿರುತ್ತವೆ ಮತ್ತು ನಮ್ಮ ಸ್ವಾಭಾವಿಕ ಅನಿಸಿಕೆಗಳಿಗೆ ಪ್ರತಿ-ಅನಿಸಿಕೆಗಳಂತೆ ಕಾಣಿಸುತ್ತವೆ, ಮತ್ತು ಪ್ರಾಯಶಃ ಅವು ಕೆಲವೊಮ್ಮೆ ಮಕ್ಕಳಿಗೆ ಅರ್ಥವಾಗದ ರೀತಿಯಲ್ಲಿ 'ಸರಳೀಕರಣಕಾರ' ದ್ದಾಗಿಯೂ ಇರುತ್ತವೆ. ಸಾಂಪ್ರದಾಯಿಕವಾಗಿ ಜೀವಶಾಸ್ತ್ರಜ್ಞರುಗಳು ಜೀವಿಗಳನ್ನು ವಿಶಾಲವಾಗಿ 'ಸಸ್ಯ'ಗಳು ಮತ್ತು 'ಪ್ರಾಣಿಗಳು' ಎಂಬ ಎರಡು ವರ್ಗೀಕರಣಗಳಾಗಿ ವಿಂಗಡಿಸುತ್ತಾರೆ. 'ಸಸ್ಯಗಳ'ನ್ನು ಕುರಿತ ಕಲ್ಪನೆಗಳನ್ನು 'ಸಸ್ಯಗಳ ಭಾಗಗಳು', 'ಸಸ್ಯಗಳ ಭಾಗಗಳ ಕಾರ್ಯಗಳು' ಇತ್ಯಾದಿಗಳೊಂದಿಗೆ ವಿವರಿಸುವ ಮೂಲಕ ಪ್ರಾಥಮಿಕ ಶಾಲೆಗಳಲ್ಲಿ ಕಲಿಸುವ ರೀತಿಯು ಸಾಕಷ್ಟು ಸರಳವಾದುದು ಎಂದು ಪರಿಗಣಿಸಲಾಗಿದೆ. ಆದರೆ 'ಸಸ್ಯಗಳ'ನ್ನು ಈ ದೃಷ್ಟಿಯಿಂದ ನೋಡುವುದು ಮಕ್ಕಳಿಗೆ ಹೆಚ್ಚು 'ಸ್ವಾಭಾವಿಕ' ಅಥವಾ ಅಪೇಕ್ಷಣೀಯವೂ ಎಂದು ಏಕೆ ಪರಿಗಣಿಸಬೇಕು? ವಾಸ್ತವದಲ್ಲಿ ಜಗತ್ತಿನಾದ್ಯಂತ ನಡೆದಿರುವ ಸಂಶೋಧನೆಗಳು ತೋರಿಸಿರುವ ಹಾಗೆ ಸಣ್ಣ ಮಕ್ಕಳಿಗೆ ಜೈವಿಕ ಮತ್ತು ಜೈವಿಕವಲ್ಲದರ ನಡುವೆ ವ್ಯತ್ಯಾಸವನ್ನು ಗುರುತಿಸುವುದು ಅಥವಾ ಜೀವಂತ ಲೋಕವನ್ನು ಸಸ್ಯಗಳು ಮತ್ತು ಪ್ರಾಣಿಗಳು ಎಂದು ವಿಂಗಡಿಸುವುದು ಗ್ರಹಿಸಲು ಕಷ್ಟವಾದ ಅಮೂರ್ತ ಕಲ್ಪನೆ. ಹಲವಾರು ದೇಶಗಳಲ್ಲಿ ವಿಜ್ಞಾನದ ಬೋಧನೆಗೆ ತಮ್ಮನ್ನು ಸಾಕಷ್ಟು ತೆರೆದುಕೊಂಡಿರುವ 13-15 ವರ್ಷದ ಮಕ್ಕಳಲ್ಲೂ ಸಹ ಜೀವಶಾಸ್ತ್ರಜ್ಞರುಗಳ ಸಾಂಪ್ರದಾಯಿಕ ವರ್ಗೀಕರಣಕ್ಕೆ ವಿರುದ್ಧವಾಗಿ ಮರವು, ಸಸ್ಯಕ್ಕಿಂತ ಭಿನ್ನ ಎಂಬ ನಂಬಿಕೆ ಬಲವಾಗಿದೆ. ಮಕ್ಕಳು ವ್ಯವಸ್ಥಿತವಾಗಿ ಸಸ್ಯಗಳು ಮತ್ತು ತರಕಾರಿಗಳ ನಡುವೆಯೂ ಸಹ ವ್ಯತ್ಯಾಸವನ್ನು ಮಾಡುತ್ತಾರೆ ('ಕ್ಯಾರೆಟ್ ಮತ್ತು ಕೋಸು ಸಸ್ಯಗಳಲ್ಲ'), ಅಥವಾ ಸಸ್ಯಗಳು ಮತ್ತು ಕಳೆಗಳ ನಡುವೆ ಕೂಡ ('ಹುಲ್ಲು ಸಸ್ಯವಲ್ಲ'). ಅಷ್ಟೇ ಅಲ್ಲದೇ ಬಹಳಷ್ಟು ಮಕ್ಕಳು ಸ್ವಾಭಾವಿಕವಾಗಿಯೇ ಬೀಜಗಳನ್ನು ಸಸ್ಯದ ಭಾಗವಾಗಿ ನೋಡುವುದಿಲ್ಲ. ಇದು ಕೆಲವು ಪ್ರಾಥಮಿಕ ಶಾಲೆಗಳ ಪಠ್ಯಕ್ರಮದಲ್ಲಿ ಈ ಸಾಂಪ್ರದಾಯಿಕ ವರ್ಗೀಕರಣಗಳ ಬಗ್ಗೆ ಕಲಿಯುವುದನ್ನು ಮುಂದೂಡಲು ಮತ್ತು ಮೊದಲು ಮಕ್ಕಳಿಗೆ ಅವರದ್ದೇ ಆದ ಸ್ವಂತ ಆಲೋಚನೆಗಳನ್ನು ಅನುಸರಿಸಿ ಪರಿಶೋಧಿಸುವಂತೆ ಅವಕಾಶವನ್ನು ಕಲ್ಪಿಸಿಕೊಡಲು ಕಾರಣವಾಗಿದೆ; ಇದನ್ನು ಮಕ್ಕಳಿಗೆ ವಿಜ್ಞಾನವು ಅವುಗಳನ್ನು ಹೇಗೆ ಭಿನ್ನವಾಗಿ ವರ್ಗೀಕರಿಸುತ್ತದೆ ಎಂಬ ಸರಿಯಾದ ತಿಳುವಳಿಕೆಯನ್ನು ನಂತರದಲ್ಲಿ ಹೊಂದಲು ನೆರವಾಗುವ ಸಲುವಾಗಿ ಹೀಗೆ ಮಾಡಲಾಗಿದೆ.

ಮಕ್ಕಳು ಹೇಗೆ ಯೋಚಿಸುತ್ತಾರೆ ಎನ್ನುವುದನ್ನು ಗಮನದಲ್ಲಿರಿಸಿಕೊಂಡು **'ಆಹಾರ'** ಎನ್ನುವ ನಿರೂಪಣಾ ವಿಷಯದ ಚೌಕಟ್ಟಿನಲ್ಲಿ 'ಸಸ್ಯ'ಗಳನ್ನು ಮೊದಲು, ಮಕ್ಕಳು ಯಾವ ಸಸ್ಯಗಳನ್ನು ತಿನ್ನುತ್ತಾರೆ ಮತ್ತು ನಾವು ವಿವಿಧ ಸಸ್ಯಗಳ ಎಲೆಗಳನ್ನು, ಬೀಜಗಳನ್ನು ಇಲ್ಲವೆ ಕಾಂಡಗಳನ್ನು ಕೂಡ ತಿನ್ನುತ್ತೇವೆ ಎನ್ನುವ ಚಿಂತನೆಯ ಮೂಲಕವೂ ಪರಿಚಯಿಸಲಾಗುತ್ತದೆ. ಇದನ್ನು ವಾಸ್ತವದಲ್ಲಿ ಈ ಕೆಳಗಿನವುಗಳಲ್ಲಿ ಯಾವುದು ಆಹಾರ? – ಕೆಂಪಿರುವೆ, ಹಕ್ಕಿಗಳ ಗೂಡು, ಆಡಿನ ಹಾಲು, ಇತ್ಯಾದಿಯಂತಹ ಪ್ರಶ್ನೆಗಳಿಗೆ ಸಂಬಂಧಿಸಿದ ಚರ್ಚೆಯ ನಂತರ ಪರಿಚಯಿಸಲಾಗುತ್ತದೆ. ನಾವು ಯಾವುದನ್ನು ಆಹಾರ ಎಂದು ಕರೆಯುತ್ತೇವೆಯೊ ಅದು ಉಳಿದವರಿಗೆ ಹಾಗನ್ನಿಸುವುದಿಲ್ಲ ಮತ್ತು ಆಹಾರ ಎನ್ನುವುದು ಒಂದು ಆಳವಾದ ಸಾಂಸ್ಕೃತಿಕ ಪರಿಕಲ್ಪನೆ ಎನ್ನುವ ವಿಚಾರಕ್ಕೆ ಅವರನ್ನು ಸೂಕ್ಷ್ಮಗ್ರಾಹಿಗಳನ್ನಾಗಿ ಮಾಡಲು ಇದನ್ನು ಹಮ್ಮಿಕೊಳ್ಳಲಾಗುತ್ತದೆ. ನಾವೀಗಾಗಲೇ ಚರ್ಚಿಸಿದ ಹಾಗೆ ಹೆಚ್ಚು ಪರಸ್ಪರ ಸಂಬಂಧಿಸಿದ ದೃಷ್ಟಿಕೋನಕ್ಕೆ ಅನುವು ಮಾಡಿಕೊಡಲು

‘ಕುಟುಂಬ ಮತ್ತು ಸ್ನೇಹಿತರು’ ಎನ್ನುವ ವಿಶಾಲವಾದ ಚಾಮರದಡಿಯಲ್ಲಿ ‘ಸಸ್ಯಗಳ’ನ್ನು ಒಂದು ಉಪ ನಿರೂಪಣಾ ವಿಷಯವನ್ನಾಗಿ ಮಾಡಲಾಗಿದೆ. ಹೀಗೆ, 3ನೇ ತರಗತಿಯ ಮಕ್ಕಳು **‘ನಮ್ಮ ಸುತ್ತುಮುತ್ತಲಲ್ಲಿರುವ ವಿಭಿನ್ನ ಸಸ್ಯಗಳು’,** ತಮ್ಮ ಪೋಷಕರು ಚಿಕ್ಕವರಿದ್ದಾಗಿನಿಂದ ಆಗಿರಬಹುದಾದ ಬದಲಾವಣೆಗಳನ್ನು ಮತ್ತು ಹಾಗೆಯೇ ತಮ್ಮ ಸುತ್ತಮುತ್ತ ಇರುವ ವಸ್ತುಗಳಲ್ಲಿ ಯಾವುದನ್ನು ಸಸ್ಯಗಳೆಂದು ಪರಿಗಣಿಸಬಹುದು ಎಂಬ ವಿಷಯಗಳ ಮೇಲೂ ಗಮನ ಹರಿಸುತ್ತಾರೆ. ಈ ಚರ್ಚೆಗಳು ಅವರ ಕಲಿಕೆಗೆ ಒಂದು ಚೌಕಟ್ಟಾಗಿ ಕಾರ್ಯನಿರ್ವಹಿಸಲೆಂದು ತಮ್ಮ ಸುತ್ತಮುತ್ತ ಇರುವ ಹಿರಿಯರು ಮತ್ತು ಪೋಷಕರೊಂದಿಗೆ ಅವರು ಮಾತನಾಡಬೇಕು ಎಂದು ನಿರೀಕ್ಷಿಸಲಾಗುತ್ತದೆ. ಪಠ್ಯಕ್ರಮದಲ್ಲಿ ಇದನ್ನೊಂದು ಚಟುವಟಿಕೆಯಾಗಿ ಮಾಡಲು ಸೂಚಿಸಲಾಗಿದೆ. 3ನೇ ತರಗತಿಯ ಮಕ್ಕಳು **‘ನಮ್ಮ ಬದುಕಿನಲ್ಲಿರುವ ಎಲೆಗಳ’** ವೈವಿಧ್ಯತೆಯ ಬಗ್ಗೆ ತಿಳಿದುಕೊಳ್ಳಲೆಂದು, ಸಸ್ಯಗಳ ಎಲೆಗಳನ್ನು ತಟ್ಟೆಗಳನ್ನಾಗಿ ಹೇಗೆ ಬಳಸಬಹುದು ಎನ್ನುವುದರ ಬಗ್ಗೆ ಮಾತನಾಡಲೆಂದು, ವರ್ಷದ ಯಾವ ಕಾಲದಲ್ಲಿ ಬಹಳಷ್ಟು ಎಲೆಗಳು ನೆಲದ ಮೇಲೆ ಬೀಳುತ್ತವೆ ಮತ್ತು ಅವುಗಳನ್ನು ಹೇಗೆ ಗೊಬ್ಬರವನ್ನಾಗಿ ಮಾಡಲು ಬಳಸಬಹುದು ಎಂಬುದರ ಬಗ್ಗೆ ತಿಳಿದುಕೊಳ್ಳಲೆಂದು, ಮತ್ತು ಅವರು ನೋಡುವ ಭಿನ್ನ ಎಲೆಗಳ ವಿಶಿಷ್ಟ ಗುರುತುಗಳನ್ನು ತಮ್ಮ ಹೂಕುಂಡಗಳ ಮೇಲೆ, ಪ್ರಾಣಿಗಳ ಮೇಲೆ, ಬಟ್ಟೆಗಳ ಮೇಲೆ, ಗೋಡೆಯ ಮೇಲೆ ಚಿತ್ರಿಸಲೆಂದು, ಅವುಗಳ ರೂಪ, ಬಣ್ಣ, ವಾಸನೆ ಇತ್ಯಾದಿಗಳನ್ನು ಸಹ ಅಧ್ಯಯನ ಮಾಡುತ್ತಾರೆ. 4ನೇ ತರಗತಿಯಲ್ಲಿ **‘ಹೂವುಗಳ’**ತ್ತ, ಹೂವನ್ನು ಮಾರುವವರತ್ತ ಗಮನಹರಿಸಿ **‘ಮರ ಯಾರಿಗೆ ಸೇರುತ್ತದೆ?’** ಎನ್ನುವುದನ್ನು ಚರ್ಚಿಸಿದರೆ, 5ನೇ ತರಗತಿಯಲ್ಲಿ ಅವರು **‘ಕಾಡುಗಳು ಮತ್ತು ಕಾಡಿನ ಜನರು’,** ಉದ್ಯಾನವನಗಳು ಮತ್ತು ಅಭಯಾರಣ್ಯಗಳು ಹಾಗೂ ‘**ದೂರದಿಂದ ಬಂದಂತಹ ಸಸ್ಯಗಳು**’ ಎಂಬಂತಹ ವಿಷಯಗಳ ಕಡೆಗೆ ಹೊರಳಿಕೊಳ್ಳುತ್ತಾರೆ. ಈ ರೀತಿಯಲ್ಲಿ, ತಮ್ಮ ಸುತ್ತಮುತ್ತಲಿನ ಸಸ್ಯಗಳ ಬಗ್ಗೆ ಸೌಂದರ್ಯಪ್ರಜ್ಞೆ ಮತ್ತು ಕಾಳಜಿಯುಳ್ಳ ತಿಳುವಳಿಕೆಯೊಂದಿಗೆ ಸಮೃದ್ಧಗೊಂಡ, ಹಾಗೂ ಒಂದು ವೈಜ್ಞಾನಿಕ, ಸಾಮಾಜಿಕ, ಸಾಂಸ್ಕೃತಿಕ ಮತ್ತು ಪರಿಸರದ ದೃಷ್ಟಿಕೋನದಿಂದ, ಹೆಚ್ಚು ಸಮಗ್ರವಾದ ಪರಸ್ಪರ ಸಂಬಂಧವಿರುವ ಅರ್ಥೈಸುವಿಕೆಯನ್ನು ನಿರ್ಮಿಸಿಕೊಳ್ಳಲು ಅವರಿಗೆ ಅನುವು ಮಾಡಿಕೊಡಲಾಗುತ್ತದೆ.

## ನಮ್ಮ ದೇಹಗಳು, ಮತ್ತು ನಾವು: ಸೂಕ್ಷ್ಮತೆ ಹಾಗೂ ಭಾವ-ಸೂಕ್ಷ್ಮತೆಯನ್ನು ಕೊಡುವ ‘ಕುಟುಂಬ ಮತ್ತು ಸ್ನೆಹಿತರು’

ಈ ಮೇಲೆ ಚರ್ಚಿಸಿದ ‘ಸಸ್ಯಗಳ’ ಹಾಗೆ ಸಾಂಪ್ರದಾಯಿಕವಾಗಿ ‘ನಮ್ಮ ದೇಹ’ವನ್ನೂ ಕೂಡ ಶುದ್ಧ ವೈಜ್ಞಾನಿಕ ಮಾದರಿಯಲ್ಲಿ ಹಾಗೂ ಸಾಮಾಜಿಕವಾಗಿ ಯಾವುದೇ ಸಂಬಂಧವಿರದ ರೀತಿಯಲ್ಲಿ ‘ನಮ್ಮ ಇಂದ್ರಿಯಗಳು’, ‘ದೇಹದ ಭಾಗಗಳು/ಅಂಗಗಳು’ ಮತ್ತು ‘ಉಸಿರಾಟ’ ‘ಜೀರ್ಣಾಂಗ’ ಇತ್ಯಾದಿ ಘಟಕಗಳನ್ನಾಗಿ ಪ್ರತ್ಯೇಕಿಸಿ ನೋಡಲಾಗುತ್ತದೆ. ಆದಾಗ್ಯು, **‘ಕುಟುಂಬ ಮತ್ತು ಸ್ನೇಹಿತರು’** ನಿರೂಪಣಾ ವಿಷಯವು, ವಿಶೇಷವಾಗಿ **1.1 ಸಂಬಂಧಗಳು** ಮತ್ತು **1.2 ಕೆಲಸ ಮತ್ತು ಆಟ** ಎನ್ನುವ ಎರಡು ಉಪನಿರೂಪಣಾ ವಿಷಯಗಳ ಮೂಲಕ ಮಕ್ಕಳು ತಮ್ಮ ದೇಹವನ್ನು ತಮ್ಮ ‘ಸ್ವಾ’ದ ಒಂದು ಭಾಗವಾಗಿ ಹೆಚ್ಚು ಸಾಂದರ್ಭಿಕ ಮತ್ತು ಸಂಬಂಧಿತ ರೀತಿಯಲ್ಲಿ ನೋಡಲು ಅನುವು ಮಾಡಿಕೊಡುತ್ತದೆ. 3ನೇ ತರಗತಿಯಲ್ಲಿ ಸಂಬಂಧಗಳ ಬಗ್ಗೆ ಮತ್ತು ಬದಲಾಗುತ್ತಿರುವ ಕುಟುಂಬದ ಸ್ವರೂಪದ ಬಗ್ಗೆ ತಿಳಿದುಕೊಳ್ಳಲೆಂದು **ಸಂಬಂಧಗಳು** ಎನ್ನುವ ಉಪನಿರೂಪಣಾ ವಿಷಯದಡಿಯಲ್ಲಿ ಅವರು ತಮ್ಮ ಜೊತೆಯಲ್ಲಿ ವಾಸಿಸುತ್ತಿರುವ ಮತ್ತು ದೂರ ಹೋಗಿರುವ ಸಂಬಂಧಿಕರ ಬಗ್ಗೆ ಚರ್ಚಿಸುತ್ತಾರೆ. ತಮ್ಮ ಸಂಬಂಧಿಕರಲ್ಲಿ ತಮಗೆ ಯಾರ ಬಗ್ಗೆ ಅಭಿಮಾನವಿದೆ ಮತ್ತು ಯಾವ

ಗುಣ ಮತ್ತು ಕೌಶಲಗಳಿಗಾಗಿ ಎನ್ನುವುದರ ಬಗ್ಗೆ ಅನುಚಿಂತನೆ ಮಾಡುತ್ತಾರೆ ಮತ್ತು ಯಾವ ಸಂದರ್ಭಗಳಲ್ಲಿ ಅಥವಾ ಹಬ್ಬಗಳಲ್ಲಿ ಹೆಚ್ಚಿನವರನ್ನು ಭೇಟಿಯಾಗುತ್ತಾರೆ ಎನ್ನುವುದನ್ನು ಅವರು ವಿವರಿಸುತ್ತಾರೆ. **'ನಮ್ಮ ದೇಹಗಳು-ವಯಸ್ಕ ಮತ್ತು ಯುವ'** ಎನ್ನುವ ಘಟಕವು ತಮ್ಮ ಕುಟುಂಬದ ಸದಸ್ಯರ ದೇಹದೊಂದಿಗೆ ತಮ್ಮ ದೇಹವನ್ನು ಹೋಲಿಸಿ ನೋಡಿಕೊಳ್ಳುವಂತೆ ನೆರವಾಗುತ್ತದೆ ಮತ್ತು ವಯಸ್ಸಾಗುತ್ತಾ ಹೋದಂತೆ ಆಗುವ ಬದಲಾವಣೆಗಳನ್ನು ಗಮನಿಸಲು ಹೇಳುತ್ತದೆ. ಬಹಳ ಮುಖ್ಯವಾಗಿ ಕುಟುಂಬದ ಚೌಕಟ್ಟು ಅವರಲ್ಲಿ ಹೆಚ್ಚು ಆತ್ಮೀಯ ಮತ್ತು ಅನೂಭೂತಿಯ ಭಾವವನ್ನು ಹುಟ್ಟಿಸುತ್ತದೆ, ಭಿನ್ನ ಸಾಮರ್ಥ್ಯ/ ಅಸಾಮರ್ಥ್ಯತೆಗಳನ್ನು ಹೊಂದಿರುವ ಜನರ ಬಗ್ಗೆ ಸೂಕ್ಷ್ಮತೆಯನ್ನು ಬೆಳಸಿಕೊಳ್ಳಲು ನೆರವಾಗುತ್ತದೆ. ಉದಾಹರಣೆಗೆ, ಅವರ ಕುಟುಂಬದಲ್ಲಿರುವ ಕೆಲವು ವಯಸ್ಸಾದ ಸದಸ್ಯರಿಗೆ ಸರಿಯಾಗಿ ಕೇಳಲು ಮತ್ತು ನೋಡಲು ಕಷ್ಟವಾಗುತ್ತಿರುವುದನ್ನು ಅವರು ಗಮನಿಸುತ್ತಾರೆ ಮತ್ತು ನಂತರ ಸ್ವತಃ ಅವರು ಅಥವಾ ಅವರ ಸ್ನೇಹಿತರು ಅಂತಹ ಸವಾಲುಗಳನ್ನು ಎದುರಿಸಿದರೆ ಹೇಗೆ ನಿಭಾಯಿಸುತ್ತಾರೆ ಎನ್ನುವುದರ ಕುರಿತು ಪರಸ್ಪರ ಚರ್ಚಿಸುತ್ತಾರೆ.

4ನೇ ತರಗತಿಯಲ್ಲಿ ಅವರ ತಾಯಿಯ ಸಂಬಂಧಿಕರು ಯಾರು ಮತ್ತು ಆಗ ಅವಳು ಯಾರ ಜೊತೆ ವಾಸಿಸುತ್ತಿದ್ದಳು ಎನ್ನುವುದನ್ನು ಮಕ್ಕಳು ಕಂಡುಕೊಂಡು ಬರುವಂತೆ ಮಾಡಲು 'ಸಂಬಂಧಗಳು' ಎನ್ನುವ ಅದೇ ಉಪನಿರೂಪಣಾ ವಿಷಯವು **'ಒಂದು ಮಗುವಾಗಿ ನಿಮ್ಮ ತಾಯಿ'** ಎನ್ನುವ ಘಟಕವನ್ನು ಹೊಂದಿದೆ. ಅವರು ತಮ್ಮ ತಾಯಿಗೆ ಸಂಬಂಧಿಸಿದಂತೆ ಅವರ ದೇಹದ ಬಗ್ಗೆ, ಒಂದು ಇಲಿ ಮರಿ ಅಥವಾ ಬೆಕ್ಕಿನ ಮರಿ ತನ್ನ ತಾಯಿಯ ಜೊತೆ ಹೇಗೆ ಸಂಬಂಧ ಹೊಂದಿದೆ ಎನ್ನುವುದರ ಬಗ್ಗೆ, ಮತ್ತು ಒಂದು ಸಂಭಾವ್ಯ ಕಥನದ ಮೂಲಕ, ಉದಾಹರಣೆಗೆ ಒಂದು ಚಂಡಮಾರುತದ ನಂತರ ಸಾಕು ಪೋಷಕರು ದತ್ತು ತೆಗೆದುಕೊಂಡ / ಪೋಷಿಸುವ ಮಕ್ಕಳ ಬಗೆಯೂ ಸಹ ಆಲೋಚಿಸುತ್ತಾರೆ. **'ಕಣ್ಣು ಮುಚ್ಚಿ ಸುತ್ತಮುತ್ತಲಿನದನ್ನು ಅನುಭವಿಸುವುದು'** ಚಟುವಟಿಕೆಯ ಮೂಲಕ ತಮ್ಮ ಸ್ಪರ್ಶ, ಘ್ರಾಣಶಕ್ತಿಯನ್ನು ಅನ್ವೇಷಿಸುತ್ತಾರೆ – ಇದನ್ನು ತಾವು ಕಾಳಜಿ ಹೊಂದಿರುವ ಜನರು ಮತ್ತು ಪ್ರಾಣಿಗಳನ್ನು ಬಿಟ್ಟು ಪ್ರತ್ಯೇಕವಾಗಿ ಮಾಡುವುದಿಲ್ಲ- ಬದಲಿಗೆ ತಮ್ಮೊಂದಿಗೆ ಬದುಕುತ್ತಿರುವ ಎಲ್ಲರನ್ನೂ ಮುಟ್ಟುವ ಮೂಲಕ, ಕೇಳಿಸಿಕೊಳ್ಳುವ ಮೂಲಕ ಮತ್ತು ಘ್ರಾಣಿಸುವ ಮೂಲಕವೇ ಅವರನ್ನು ಗುರುತಿಸುವ ಪ್ರಯತ್ನ ಮಾಡುತ್ತಾರೆ. ಮುಂದುವರೆದು ಅವರು ನಯ /ಒರಟು, ಬಿಸಿ/ತಂಪು, ಒದ್ದೆ/ಒಣ, ಅಂಟು/ಜಾರುವಿಕೆ ಇತ್ಯಾದಿ ಸ್ಪರ್ಶಾನುಭವಗಳನ್ನು ಅನ್ವೇಷಿಸುತ್ತಾರೆ ಮತ್ತು ಅವರು ಮುಟ್ಟಬಾರದ ಕೆಲವು ವಸ್ತುಗಳು (ಅಥವಾ ಜನರು) ಇರಬಹುದೇ ಎಂದು ಅವರನ್ನು ಆಲೋಚಿಸಲು ಕೇಳಲಾಗುತ್ತದೆ. ಸ್ಪರ್ಶ ಎನ್ನುವುದು ಪ್ರೀತಿಯಿಂದ ನೇವರಿಸುಸುವುದಾಗಿರಬಹುದು ಇಲ್ಲವೆ ನೋವನ್ನುಂಟುಮಾಡುವ ಹೊಡೆತವಾಗಿರಬಹುದು, ನೇವರಿಸುವ ಸ್ಪರ್ಶದಲ್ಲೂ ಸಹ 'ಒಳ್ಳೆಯ' ಮತ್ತು 'ಕೆಟ್ಟ' ಸ್ಪರ್ಶಗಳಿರಬಹುದು ಎನ್ನುವುದರ ಬಗ್ಗೆಯೂ ಕೂಡ ಈ ಘಟಕ ಅವರನ್ನು ಸೂಕ್ಷ್ಮಗ್ರಾಹಿಗಳನ್ನಾಗಿ ಮಾಡಲು ಪ್ರಯತ್ನಿಸುತ್ತದೆ.

5ನೇ ತರಗತಿಯಲ್ಲಿ **'ನಾನು ಯಾರ ಹಾಗೆ ಇದ್ದೇನೆ?'** ಎನ್ನುವ ಘಟಕವು ಅವರಿಗೆ ಕುಟುಂಬದಲ್ಲಿರುವ ಹೋಲಿಕೆಗಳ ಬಗ್ಗೆ ಅಂದರೆ ಮುಖ, ಧ್ವನಿ, ಎತ್ತರ ಇತ್ಯಾದಿಗಳ ಹೋಲಿಕೆಗಳನ್ನು ಮತ್ತು **'ಯಾರು ಅತ್ಯಂತ ಗಟ್ಟಿಯಾಗಿ ನಗುತ್ತಾರೆ?'** ಎನ್ನುವಂತಹ ವಿಶಿಷ್ಟ ಗುಣಗಳನ್ನೂ ಕೂಡ ಗುರುತಿಸಲು ಸಹಾಯ ಮಾಡುತ್ತದೆ. ಇದು ಮುಂದುವರೆದು ಹೆಲೆನ್ ಕೆಲ್ಲರ್ ನಂತಹವರು ಬ್ರೈಲ್ ಲಿಪಿಯ ಹಾಳೆಯನ್ನು **'ಮುಟ್ಟಿನೋಡಿ ಓದುವುದರ'**

ಮೂಲಕ ಅಸಾಧ್ಯವಾದ ಸವಾಲುಗಳನ್ನು ಹೇಗೆ ಎದುರಿಸಿದರು ಎನ್ನುವುದನ್ನು ಅವರದ್ದೇ ಆದ ಆತ್ಮಚರಿತ್ರೆಯ ವಿವರಗಳ ಮೂಲಕ ತಿಳಿಸಿಕೊಡುತ್ತದೆ.

'ಕುಟುಂಬ ಮತ್ತು ಸ್ನೇಹಿತರು' ಮತ್ತೊಂದು **ಉಪನಿರೂಪಣಾ ವಿಷಯವಾದ 1.2 'ಕೆಲಸ ಮತ್ತು ಆಟ'ವನ್ನು** ಹೊಂದಿದೆ. ಇದರ ಮೂಲಕ ಕುಟುಂಬದಲ್ಲಿ ಮತ್ತು ನೆರೆಹೊರೆಯಲ್ಲಿ ಜನರು ಕೆಲಸ ಮಾಡುವಾಗ ಮತ್ತು 'ಮಾಡದೆ ಇರುವಾಗ' ತೊಡಗಿಕೊಂಡಿರುವ ವಿಭಿನ್ನ ಚಟುವಟಿಕೆಗಳನ್ನು ಇದು ಅನ್ವೇಷಿಸುತ್ತದೆ. ಇದು ಅವರಿಗೆ ಸಿದ್ಧಮಾದರಿಯ ಲಿಂಗಾಧಾರಿತ ಪಾತ್ರಗಳನ್ನು ಸೂಕ್ಷ್ಮವಾಗಿ ಗಮನಿಸಲು ಮತ್ತು ಒಂದು ಕೆಲಸ ಮಾಡುತ್ತಿರುವ ಮಗುವಿನ ಜೊತೆಯಲ್ಲಿ ತಮ್ಮ ದಿನಚರಿಯನ್ನು ಹೋಲಿಸಿ ನೋಡಲು ಕಲಿಸುತ್ತದೆ. ಇದು ಅವರಿಗೆ ಅವರು ಆಡುವ ಆಟಗಳನ್ನು ವಿಶ್ಲೇಷಿಸಲು ಮತ್ತು ತಮ್ಮ ಅಜ್ಜ ಅಜ್ಜಿಯರು ಚಿಕ್ಕವರಿದ್ದಾಗ ಆಡುತ್ತಿದ್ದ ಸಾಂಪ್ರದಾಯಿಕ ಆಟಗಳು ಮತ್ತು ಆಟಿಕೆಗಳು ಅವರ ಕಾಲದಿಂದ ಈ ಕಾಲಕ್ಕೆ ಹೇಗೆ ಬದಲಾಗಿವೆ ಎನ್ನುವುದನ್ನು ನೋಡಲು ಅನುವು ಮಾಡಿಕೊಡುತ್ತದೆ. 5ನೇ ತರಗತಿಯಲ್ಲಿ ಈ ಉಪನಿರೂಪಣಾ ವಿಷಯವು **'ತಂಡದ ಆಟಗಳು-ನಿಮ್ಮ ಹೀರೋಗಳು'** ಎಂಬುದರ ಮೇಲೆ ಮತ್ತು ಕದನ ಕಲೆಗಳು ಅಥವಾ ಮಲ್ಲರನ್ನು ಮತ್ತು ಅವರಿಗೆ ಹೇಗೆ ತರಬೇತಿ ಕೊಡಲಾಗುತ್ತದೆ ಎನ್ನುವುದರ ಮೇಲೂ ಗಮನ ನೀಡಲಾಗುತ್ತದೆ. ನಮ್ಮ ದೇಹ ಮತ್ತು ಉಸಿರಾಟದ ಪ್ರಕ್ರಿಯೆಯ ಕುರಿತಾದ ಅನ್ವೇಷಣೆಯು ಸಹಜವಾಗಿಯೆ ಈ ವಿಷಯಕ್ಕೆ ಸೇರುತ್ತದೆ ಮತ್ತು **'ಬ್ಲೊ ಹಾಟ್ ಬ್ಲೊ ಕೋಲ್ಡ್'** ಉಪ ನಿರೂಪಣಾ ವಿಷಯದಲ್ಲಿ ಓಡಿದ ನಂತರ ಅವರೆಷ್ಟು ವೇಗವಾಗಿ ಉಸಿರಾಡುತ್ತಾರೆ ಎನ್ನುದನ್ನು ಹೋಲಿಸಿ ನೋಡಲಾಗುತ್ತದೆ. ಅವರು ತಮ್ಮ ಎದೆಯನ್ನು ಎಷ್ಟು ಉಬ್ಬಿಸಿಕೊಳ್ಳಬಹುದು, ಅವರು ಗಾಜಿನ ಲೋಟದ ಮೇಲೆ ಉಸುರುವ ಮೂಲಕ ಅದನ್ನು ಹೇಗೆ ಮಬ್ಬುಗೊಳಿಸುತ್ತಾರೆ, ಮತ್ತು ಅವರ ಥಂಡಿಯಾದ ಕೈಯನ್ನುಊದಿ ಹೇಗೆ ಬೆಚ್ಚಗೆ ಮಾಡಿಕೊಳ್ಳುತ್ತಾರೆ, ಹಾಗೆಯೇ ಬಿಸಿಯಾಗಿದ್ದನ್ನು ಹೇಗೆ ತಣ್ಣಗೆ ಮಾಡಿಕೊಳ್ಳುತ್ತಾರೆ ಎನ್ನುವುದನ್ನು ಸಹ ನೋಡಲಾಗುತ್ತದೆ. ಸಲಹೆ ಮಾಡಿದಂತೆ ಈ ಘಟಕವು ಡಾ. ಜಾಕಿರ್ ಹುಸೇನ್ ಅವರ "**ಉಸೀ** ಸೆ ಥಂಡಾ **ಉಸೀ** ಸೆ ಗರಮ್" (USee Se Thanda Usee Se Garam - ಅದಕ್ಕಿಂತ ತಂಪು ಅದಕ್ಕಿಂತ ಬಿಸಿ) ಎನ್ನುವ ಸುಂದರ ಕತೆಯನ್ನು ಸಂಪನ್ಮೂಲವನ್ನಾಗಿ ಬಳಸಿಕೊಳ್ಳಬಹುದು. **'ಸ್ವಚ್ಛ ಕೆಲಸ, ಕೊಳಕು ಕೆಲಸ'** ಘಟಕವು ಮಕ್ಕಳನ್ನು ಕೆಲಸದ ಘನತೆಯ ಬಗ್ಗೆ ಮತ್ತು ವಿಭಿನ್ನ ಜನರ ಕೆಲಸಗಳು ಹೇಗೆ ಸಮಾಜಕ್ಕೆ ಅಗತ್ಯವಾದ ಸೇವೆಗಳನ್ನು ಒದಗಿಸುತ್ತದೆ ಎನ್ನುವುದರ ಬಗ್ಗೆ, ಬಹುಶಃ ಗಾಂಧಿಯವರ ಕೆಲಸವನ್ನು ಆಧರಿಸಿದ ಒಂದು ಆಖ್ಯಾನ /ಕತೆಯ ಮೂಲಕ , ಸೂಕ್ಷ್ಮಗ್ರಾಹಿಗಳನ್ನಾಗಿ ಮಾಡಬಹುದು.

## ನಾವು ಸೃಷ್ಟಿಸುವ ಮತ್ತು ಮಾಡುವ ಸಂಗತಿಗಳು

**ನಾವು ಸೃಷ್ಟಿಸುವ ಮತ್ತು ಮಾಡುವ ಸಂಗತಿಗಳ** ಕ್ಷೇತ್ರವನ್ನು ಒಂದು ಪ್ರಮುಖ ಭಾಗಾಂಶವಾಗಿ ಮತ್ತು ಇತರ ಎಲ್ಲ ನಿರೂಪಣಾ ವಿಷಯಗಳನ್ನು ಅರ್ಥ ಮಾಡಿಕೊಳ್ಳುವ ಪ್ರಕ್ರಿಯೆಯಲ್ಲಿ ಅಂತರ್ಗತವಾಗಿರುವ ಎಲ್ಲಕ್ಕೂ ಒಂದು ಸಮಾನವಾದ ಎಳೆ ಎಂಬಂತೆಯೂ ಸಹ ಕಲ್ಪಿಸಲಾಗಿದೆ. ಮನುಷ್ಯರಾದ ನಾವು ನಮ್ಮ ಅಗತ್ಯಗಳನ್ನು ಪೂರೈಸಿಕೊಳ್ಳುವುದಕ್ಕೆ ಮಾತ್ರವಲ್ಲದೆ ಹಲವಾರು ಬಗೆಯಲ್ಲಿ ನಮ್ಮನ್ನು ಅಭಿವ್ಯಕ್ತಿಗೊಳಿಸಿಕೊಳ್ಳಲು ಮತ್ತು ನಮ್ಮ ಮಿತಿಗಳನ್ನು ಮೀರಿ ನಿಲ್ಲಲು ವಸ್ತುಗಳನ್ನು ತಯಾರಿಸುತ್ತೇವೆ. ನಾವೇ ಖುದ್ದಾಗಿ ಒಂದು ಕಾರ್ಯವನ್ನು ಮಾಡಿದಾಗ ಚೆನ್ನಾಗಿ ಗ್ರಹಿಸುತ್ತೇವೆ. ಬಹಳಷ್ಟು ಬಾರಿ ಸಣ್ಣ ಮಗುವಿಗೆ ಒಂದು ಆಟಿಕೆಯು ಉಡುಗೊರೆಯಾಗಿ ಸಿಕ್ಕಾಗ ಅದು ಇರುವ ರೀತಿಯಲ್ಲಿ ಎಷ್ಟು ಖುಷಿ

ಪಡುತ್ತದೆಯೊ ಅಷ್ಟೇ ಖುಷಿಯನ್ನು ಆ ವಸ್ತುವನ್ನು ಬಿಚ್ಚಿ ಮತ್ತೆ ತನ್ನದೇ ಆದ ರೀತಿಯಲ್ಲಿ ಮರುಜೋಡಣೆ ಮಾಡುವ ಕೆಲಸದಲ್ಲಿಯೂ ಕಂಡುಕೊಳ್ಳುತ್ತದೆ. ಹೊಸ ಪುಸ್ತಕವೊಂದು ಅದಕ್ಕೆ ಕೊಟ್ಟಾಗ ಅದನ್ನು ನೋಡುವುದರಲ್ಲಿ ಎಷ್ಟು ಖುಷಿಪಡುತ್ತದೆಯೋ ಅಷ್ಟೇ ಖುಷಿಯನ್ನು ಅದಕ್ಕೆ 'ತನ್ನದೇ ಆದ ಚಿತ್ರ'ಗಳನ್ನು ಸೇರಿಸುವುದರಲ್ಲಿ ಆಸಕ್ತಿಯನ್ನು ತೋರಿಸುತ್ತದೆ. ಔಪಚಾರಿಕ ಶಿಕ್ಷಣ ಮತ್ತು 'ಒಳ್ಳೆಯ ಮಗುವಾಗಿರುವುದನ್ನು' ಕಲಿಸುವ ಪ್ರಕ್ರಿಯೆಗಳು ಇಂತಹ ಕ್ರಿಯೆಗಳನ್ನು ಉತ್ತೇಜಿಸುವುದಿಲ್ಲ. ಹಾಗಾಗಿ, 'ನಾವು ಸೃಷ್ಟಿಸುವ ಮತ್ತು ಮಾಡುವ ಸಂಗತಿ' ಗಳ ನಿರೂಪಣಾ ವಿಷಯವು ಕಲಿಕೆಯು ಅರ್ಥಪೂರ್ಣವಾಗುವ ರೀತಿಯಲ್ಲಿ ನಮ್ಮ ವೈವಿಧ್ಯಮಯವಾದ ಶಕ್ತಿಗಳಿಗೆ/ಭಾಗಾಂಶಗಳಿಗೆ ಮರುಜೀವವನ್ನು ಕೊಡಲು ಒಂದು ಅವಕಾಶವಾಗಿದೆ. ಇಲ್ಲಿ ಸಂಜ್ಞಾನ ಎನ್ನುವುದು ಕೇವಲ ಗುರಿಯಾಗಿರದೆ ಅನುಭವ, ವಿಫಲತೆ, ಅವಲೋಕನ, ಯಶಸ್ಸು ಇತ್ಯಾದಿಗಳಿಂದ ಸಮೃದ್ಧಗೊಂಡ ಒಂದು ಪ್ರಕ್ರಿಯೆಯಾಗಿರುತ್ತದೆ. ಅಷ್ಟೇ ಅಲ್ಲದೆ ಶ್ರೀಮಂತಿಕೆಯ ಮತ್ತು ಜೀವಂತವಾಗಿರುವ ನಮ್ಮ ಸಾಂಪ್ರದಾಯಿಕ ಕಲೆ ಮತ್ತು ಕಸುಬುಗಳಿಗೆ, 'ಸೃಷ್ಟಿಸುವ ಮತ್ತು ಮಾಡುವ ಸಂಗತಿಗಳಿಗೆ' ನಮ್ಮ ಪಠ್ಯಕ್ರಮಗಳಲ್ಲಿ ಸಲ್ಲಬೇಕಾದ ಸ್ಥಾನವನ್ನು ಕೊಡಬೇಕಾದ ಅಗತ್ಯವೂ ಸಹ ಇದೆ.

ವಿಜ್ಞಾನಕ್ಕೆ ಮತ್ತು ಸಮಾಜಕ್ಕೆ ಸಂಬಂಧಿಸಿದಂತೆ ವಿನ್ಯಾಸ ಹಾಗೂ ತಾಂತ್ರಿಕತೆಯ ಮಹತ್ವವನ್ನು ಅರ್ಥ ಮಾಡಿಕೊಳ್ಳುವುದು ಈ ನಿರೂಪಣಾ ವಿಷಯಕ್ಕೆ ಸಂಬಂಧಿಸಿದ ಮತ್ತೊಂದು ಅಂಶವಾಗಿದೆ. ತಾಂತ್ರಿಕತೆ ಎನ್ನುವುದು ಕೇವಲ ಆನ್ವಯಿಕ ವಿಜ್ಞಾನ ಮಾತ್ರವಾಗಿರದೆ ಅದಕ್ಕೆ ತನ್ನದೇ ಅದ ಸ್ವತಂತ್ರ ಅಸ್ತಿತ್ವವಿದ್ದು ಹಲವು ವಿಷಯಗಳಲ್ಲಿಅದು ವಿಜ್ಞಾನದ ಬೆಳವಣಿಗೆಗೂ ಪೂರ್ವದ್ವಾಗಿರುತ್ತದೆ. ಮೇಲಾಗಿ, ನಾವು ಸೃಷ್ಟಿಸುವ ಮತ್ತು ಮಾಡುವ ಹಲವಷ್ಟು ವಸ್ತುಗಳು ಮತ್ತು ಕ್ರಿಯೆಗಳು ಕಚ್ಚಾವಸ್ತುಗಳು ಮತ್ತು ಭೂಮಿ ಹಾಗೂ ಭೂಮಿಯ ಮೇಲಿರುವ ಜೀವಿಗಳ ಮೇಲೆ ಪರಿಣಾಮವನ್ನು ಬೀರುವ ಹಸ್ತಕ್ಷೇಪಗಳನ್ನು ಅವಲಂಬಿಸಿವೆ.

ಈ ನಿರೂಪಣಾ ವಿಷಯವು ದೈಹಿಕ ಶ್ರಮದ ಘನತೆಯ ವಿಷಯವನ್ನು ಉದ್ದೇಶಿಸಲೂ ಕೂಡ ಸಹಾಯ ಮಾಡುತ್ತದೆ. ಒಂದು ಚಿಕ್ಕ ಮಗುವು ಗುಡಿಸುವುದನ್ನು, ಮನೆಗೆಲಸದಲ್ಲಿ ತಾಯಿಗೆ ಸಹಾಯ ಮಾಡುವುದನ್ನು ಮತ್ತು ತನ್ನ ಕೈಗೆ ಸಿಗುವ ವಿದ್ಯುತ್ ಉಪಕರಣಗಳ ಮೇಲೆ ಕೈಯಾಡಿಸುವುದನ್ನು ಇಷ್ಟಪಡುತ್ತದೆ. ಆದಾಗ್ಯೂ, ಅಲ್ಪ ಕಾಲದಲ್ಲಿ ತಾನು ಸಂತೋಷದಿಂದ ಮಾಡುತ್ತಿದ್ದ ಆ ಕೆಲಸಗಳಿಗೆ ಮೌಲ್ಯಗಳನ್ನು ಆರೋಪಿಸತೊಡಗುತ್ತದೆ. ಗುಡಿಸುವುದು ಕೊಳಕಿನ ಕೆಲಸವಾಗುತ್ತದೆ ಮತ್ತು ಅದನ್ನು ಕೆಲಸದವರು ಅಥವಾ ಮನೆಯಲ್ಲಿನ ಹೆಂಗಸರು ಮಾಡಬೇಕಾದ ಕೆಲಸವಾಗುತ್ತದೆ, ಉಪಕರಣಗಳ ಮೇಲೆ ಕೈಯಾಡಿಸುವುದು ಗಂಡಸರ ಮತ್ತು ಹುಡುಗರ ಕೆಲಸವಾಗುತ್ತದೆ. ಸಂಕ್ಷಿಪ್ತವಾಗಿ ಹೇಳುವುದಾದರೆ ಕೆಲಸ ಎನ್ನುವುದು ಜನರನ್ನು ಬೇರ್ಪಡಿಸುವ, ಅವರ ಬಗ್ಗೆ ತೀರ್ಮಾನಕ್ಕೆ ಬರುವ, ಮತ್ತು ಅದಕ್ಕೊಂದು ನಿರ್ದಿಷ್ಟ ಲಿಂಗ, ಜಾತಿ ಅಥವಾ ವರ್ಗದ ಮೌಲ್ಯವನ್ನು ಆರೋಪಿಸುವುದಾಗುತ್ತದೆ. ಮಹಾತ್ಮ ಗಾಂಧೀಯವರ 'ಮೂಲ ಶಿಕ್ಷಣ'ದ ಮುಂಗಾಣ್ಕೆ ಮತ್ತು ಯೋಜನೆಯು ಈ ಬಿರುಕುಗಳನ್ನು ಮೀರಿ ಇರುವ ಸಾಧ್ಯತೆಯನ್ನು ಹೊಂದಿತ್ತು. ಪ್ರಸ್ತುತ ಪಠ್ಯಕ್ರಮವು, ಸುಸ್ಥಿರ ಅಭಿವೃದ್ಧಿ ಮತ್ತು ಸೂಕ್ತತಂತ್ರಜ್ಞಾನಗಳಿಗೆ ಒಂದು ದೂರದೃಷ್ಟಿಯನ್ನು ಹೊಂದುವುದರೊಂದಿಗೆ ಪರಿಸರ ಶಿಕ್ಷಣ ಮತ್ತು ಸಾಮಾಜಿಕ ಸಂಬಂಧಗಳಿಗೆ ಸಂಬಂಧಿಸಿದಂತೆ ಸಮಕಾಲೀನ ಕಾಳಜಿಗಳನ್ನು ಒಳಗೊಳ್ಳುತ್ತಲೇ, ಆ ದಿಕ್ಕಿನಲ್ಲಿ ಇಡುತ್ತಿರುವ ಒಂದು ಸಣ್ಣ ಹೆಜ್ಜೆಯಾಗಿದೆ.

ಈ ಪಠ್ಯಕ್ರಮವು ಅಸಮಾನತೆ ಅಥವಾ ಭಿನ್ನತೆಗಳಂತಹ ವಿಷಯಗಳನ್ನು ನೇರವಾಗಿ ಉದ್ದೇಶಿಸಲು ಮತ್ತು ಮಕ್ಕಳಿಗೆ ವಿಮರ್ಶನಶೀಲರಾಗಿ ಯೋಚಿಸುವಂತೆ ಪ್ರೋತ್ಸಾಹಿಸಲು

ಪ್ರಮುಖ ಪ್ರಶ್ನೆಗಳನ್ನು ಪ್ರಜ್ಞಾಪೂರ್ವಕವಾಗಿ ಒಳಗೊಂಡಿದೆ ಎನ್ನುವುದನ್ನು ಇಲ್ಲಿ ಒತ್ತಿ ಹೇಳಬೇಕಾಗಿದೆ. ಅದು ಶಾಲೆಯಲ್ಲಿಯೇ ಆಗಲೀ ಅಥವಾ ನೀರು ಪಡೆದುಕೊಳ್ಳುವ ಸ್ಥಳದಲ್ಲೇ ಆಗಲೀ ಇರುವ ಸಾಮಾಜಿಕ ಭೇದಭಾವಗಳಿರಬಹುದು, ವಿಕಲಚೇತನರ ಬಗ್ಗೆ ಇರಬಹುದು, ಅಥವಾ ದುಡಿಯುವ ಮಕ್ಕಳ ಬಗ್ಗೆ ಇರಬಹುದು,  ಇವೆಲ್ಲವೂ ಮಕ್ಕಳ ವಾಸ್ತವಿಕತೆಯ ಭಾಗವಾಗಿವೆ, ಅದರಲ್ಲೂ ವಿಶೇಷವಾಗಿ ಅಂಚಿಗೆ ತಳ್ಳಲ್ಪಟ್ಟ ವರು ಮತ್ತು ಆ ಕಾರಣದಿಂದಾಗಿ ಶಾಲೆಯಿಂದ ಹೊರದೂಡಲ್ಪಡುವಂತಹ ಪರಿಸ್ಥಿತಿಗೆ ಬಲಿಯಾಗಬಹುದಾದ ಮಕ್ಕಳಿಗೆ ಸಂಬಂಧಿಸಿದಂತೆ ಇದು ವಿಶೇಷವಾಗಿ ಅನ್ವಯಿಸುತ್ತದೆ. ಪಠ್ಯಕ್ರಮದ ಉದ್ದೇಶಗಳು ಸ್ಪಷ್ಟವಾಗಿ ಶಾಲೆಯಲ್ಲಿ ತಪ್ಪಿಸಿಕೊಳ್ಳುವ ಮತ್ತು ಮೌನವಾಗಿರುವ ಸಂಸ್ಕೃತಿಯನ್ನು ಉತ್ತೇಜಿಸದೆ, ಅದೆಷ್ಟೇ ಅಹಿತಕರವಾಗಿದ್ದರೂ ಕೂಡ, ಮಕ್ಕಳು ಬದುಕಿನ ಈ ಅನುಭವಗಳನ್ನು ಕುರಿತು ವಿಮರ್ಶನಶೀಲರಾಗಿ ಆಲೋಚಿಸುವಂತೆ ಮತ್ತು ಅಭಿವ್ಯಕ್ತಿಸುವಂತೆ ಅವರಿಗೆ ಅನುವು ಮಾಡಿಕೊಡುವ ಅಗತ್ಯವಿದೆ ಎಂದು ಒತ್ತಿಹೇಳುತ್ತದೆ. ಇದು ವಿಶೇಷವಾಗಿ ತರಗತಿ ಕೊಠಡಿಗಳಲ್ಲಿ ನಡೆಯುವ ಬೋಧನಾ ಕಲಿಕಾ ಪ್ರಕ್ರಿಯೆಗಳಲ್ಲಿ ಮತ್ತು ಪಠ್ಯಪುಸ್ತಕಗಳಲ್ಲಿ ಸೂಕ್ಷ್ಮ ವಿಧಾನವನ್ನು ಅಳವಡಿಸಿಕೊಳ್ಳುವುದನ್ನು ಬೇಡುತ್ತದೆ, ಮತ್ತು ಈ ಪ್ರಶ್ನೆಗಳಿಗೆ ಹೇಗೆ ನ್ಯಾಯ ಸಲ್ಲಿಸಬಹುದು ಎನ್ನುವುದರ ಬಗ್ಗೆ ಶಿಕ್ಷಕರು ಚಿಂತಿಸಬೇಕಾದ ಅಗತ್ಯವಿದೆ.

## ಮಕ್ಕಳ ಕಲಿಕೆಯನ್ನು ಬೆಂಬಲಿಸುವುದು: ಪಠ್ಯಕ್ರಮದ ಪ್ರಶ್ನೆಯ ರಚನಾಕ್ರಮ

"ನಾನು ಮಾಡುತ್ತೇನೆ, ನಾನು ಅರ್ಥಮಾಡಿಕೊಳ್ಳುತ್ತೇನೆ" ಎನ್ನುವ ಚೀನಾದ ಪ್ರಸಿದ್ಧ ನಾಣ್ನುಡಿಯು 1970ರ ದಶಕದಿಂದ ನಮ್ಮ ದೇಶವನ್ನೂ ಒಳಗೊಂಡು ಹಲವಾರು ದೇಶಗಳ ಪ್ರಾಥಮಿಕ ಶಿಕ್ಷಣದ ತತ್ವವಾಗಿದೆ. ಇದು 'ಮಾಡುವ ಮೂಲಕ ಕಲಿಯುವ' ತತ್ವಕ್ಕೆ ಹೆಚ್ಚು ಒತ್ತನ್ನು ನೀಡುತ್ತದೆ. ಕಲಿಯುವವರು ನೇರವಾಗಿ ತಮ್ಮ ಪರಿಸರದೊಂದಿಗೆ ಅಂತರಕ್ರಿಯೆಯಿಸುವ ಮೂಲಕ ತಮ್ಮ ಗ್ರಹಿಕೆಯನ್ನು ಕ್ರಿಯಾಶೀಲವಾಗಿ ರಚಿಸಿಕೊಳ್ಳುತ್ತಾರೆ ಎನ್ನುವುದನ್ನು ಇದು ಸೂಚಿಸುತ್ತದೆ. ಆದಾಗ್ಯೂ,  ಈ ಮಾದರಿಯು ಪ್ರತಿಯೊಬ್ಬ ಕಲಿಕಾರ್ಥಿಯನ್ನು ಒಂಟಿ ಜೀವಿ ಎನ್ನುವಂತೆ ನೋಡುತ್ತದೆ – ಅಂದರೆ  ಅರ್ಥ ಮಾಡಿಕೊಳ್ಳಲು ಪ್ರಯತ್ನಿಸುತ್ತಿರುವುದು ಮತ್ತು ಪ್ರತಿಯೊಂದು ಪರಿಕಲ್ಪನೆಯನ್ನು ಅಭಿವೃದ್ಧಿಪಡಿಸಲು ಹೆಣಗಾಡುತ್ತಿರುವ ಆ ವ್ಯಕ್ತಿ "ನಾನು" ಆಗಿರುತ್ತದೆ. ಈ ವಿಧಾನವು ಪಿಯಾಝೆಯ 'ಸಂಜ್ಞಾನಾತ್ಮಕ ರಾಚನಿಕವಾದ ಮನೋವಿಜ್ಞಾನ'ಕ್ಕೆ ಸಂಬಂಧಿಸಿದ್ದಾಗಿದ್ದು ಅದು ಶಿಕ್ಷಕರು ಮಕ್ಕಳು ಬೆಳವಣಿಗೆ ಹೊಂದಲು ಒಂದು ಪ್ರಚೋದನಾಕರವಾದ ವಾತಾವರಣವನ್ನು ಮಾತ್ರ ಒದಗಿಸಲು  ಸಾಧ್ಯ ಎನ್ನುವುದನ್ನು ಸೂಚಿಸುತ್ತದೆ. ಮಕ್ಕಳು ಸಹಜವಾಗಿ ಬೌದ್ಧಿಕ ಬೆಳವಣಿಗೆಯ  ವಿವಿಧ ಹಂತಗಳ ಮೂಲಕ ಬೆಳೆಯುತ್ತಾ ಹೋದಂತೆ, ಅವರನ್ನು ಕೋಮಲವಾದ ಸಸ್ಯಗಳಂತೆ ವ್ಯಕ್ತಿಗತವಾಗಿ  ಪೋಷಿಸಬೇಕು ಎನ್ನುವುದನ್ನೂ ಸಹ ಸೂಚಿಸುತ್ತದೆ. ಆದಾಗ್ಯೂ,  ಕಳೆದ ಕೆಲವು ದಶಕಗಳಿಂದ ಮಕ್ಕಳು ಏಕಾಂಗಿಯಾಗಿ ಪರಿಸರದೊಂದಿಗೆ ಅಂತರಕ್ರಿಯೆ ಮಾಡುವುದರ ಮೂಲಕ ಕಲಿಯುವುದಿಲ್ಲ, ಬದಲಿಗೆ ಹೆಚ್ಚು ಇತರ ಜನರೊಂದಿಗೆ – ವಯಸ್ಸಾದವರು ಮತ್ತು ಇತರ ಮಕ್ಕಳು – ಮಾತನಾಡುತ್ತಾ ಚರ್ಚಿಸುತ್ತಾ ಕಲಿಯುತ್ತಾರೆ ಎನ್ನುವುದನ್ನು ಕಂಡುಕೊಳ್ಳಲಾಗಿದೆ. 'ಸಾಮಾಜಿಕ ರಾಚನಿಕವಾದ' ಎನ್ನುವ ಈ ಮನೋವಿಜ್ಞಾನದ ವಿಧಾನವು ಮಕ್ಕಳ ಚಿಂತನಾ ಪ್ರಕ್ರಿಯೆಗೆ ವಯಸ್ಕರ ಬೆಂಬಲ ಅತ್ಯಂತ ಅಗತ್ಯವೆಂದು ತೋರಿಸಿಕೊಟ್ಟ ವೈಗಾಟ್ಸ್ಕಿ ಮತ್ತು ಬ್ರೂನರ್ ಅವರ ಸಂಶೋಧನಾ ಕೃತಿಗಳಿಂದ ಪ್ರಭಾವಿತವಾಗಿದೆ. ಒಂದು ಮಗುವು ತನ್ನಷ್ಟಕ್ಕೆ ತಾನೆ ಏನನ್ನು ಕಲಿಯುತ್ತದೆಯೊ ಅದಕ್ಕಿಂತಲೂ ಒಂದು ಸೂಕ್ತ ಪ್ರಶ್ನೆ ಅಥವಾ ಸಲಹೆಯಿಂದ

ಮಗುವಿನ ಗ್ರಹಿಕೆಯನ್ನು ಹೆಚ್ಚು ವಿಶಾಲಗೊಳಿಸಬಹುದಾಗಿದೆ. ವಾಸ್ತವದಲ್ಲಿ, ಪ್ರಶ್ನೆಗಳು, ಚರ್ಚೆಗಳು, ಮತ್ತು ವಯಸ್ಕರ ಬೆಂಬಲದಂತಹ 'ಚೌಕಟ್ಟನ್ನು' ಒದಗಿಸುವ ಮೂಲಕ ಮಕ್ಕಳಿಗೆ 'ಸಮೀಪಸ್ಥ ಬೆಳವಣಿಗೆಯ ವಲಯ' ಎಂದು ಏನನ್ನು ಕರೆಯಲಾಗುತ್ತದೆಯೊ ಅದನ್ನು ದಾಟಿ ಗ್ರಹಿಕೆಯ ಮತ್ತೊಂದು ಹಂತಕ್ಕೆ ಜಿಗಿಯಲು ಸಹಾಯಮಾಡಬಹುದು ಎನ್ನುವುದನ್ನು ತೋರಿಸಲಾಗಿದೆ.

ಕಲಿಕೆಯ ಈ ಸಾಮಾಜಿಕ ರಾಚನಿಕವಾದ ದೃಷ್ಟಿಕೋನದ ಚೌಕಟ್ಟಿನೊಳಗೆ ಪ್ರಸ್ತುತ ಪಠ್ಯಕ್ರಮವನ್ನು ರಚಿಸಲಾಗಿದೆ. ತಮ್ಮ ವೈಯಕ್ತಿಕ ಸಾಮರ್ಥ್ಯಗಳನ್ನು ಮೀರಿ ಮಕ್ಕಳು ಶಾಲೆಯಲ್ಲಿ ಮತ್ತು ಮನೆಯಲ್ಲಿ, ವಯಸ್ಕರೊಂದಿಗೆ ಮತ್ತು ತಮ್ಮ ಜೊತೆಯವರ ನಡುವೆ ಚರ್ಚಿಸುವುದನ್ನೂ ಸೇರಿದಂತೆ ಸೂಕ್ತವಾದ ಪ್ರಶ್ನೆಗಳು ಮತ್ತು ಹಸ್ತಕ್ಷೇಪಗಳ ಮೂಲಕ ಜ್ಞಾನವನ್ನು ರಚಿಸಿಕೊಳ್ಳಲು ಬೆಂಬಲ ದೊರೆಯುತ್ತದೆ ಎಂದು ಆಶಿಸಲಾಗಿದೆ. *ಪ್ರಮುಖ ಪರಿಕಲ್ಪನೆಗಳ ಪಟ್ಟಿಯನ್ನು ಮಾಡುವುದರ ಬದಲಾಗಿ ಆ ವಯಸ್ಸಿನ ಮಕ್ಕಳ ಆಲೋಚನಾ ಪ್ರಕ್ರಿಯೆಗೆ ಪ್ರಚೋದನೆ ದೊರೆಯಲೆಂದು ಸೂಕ್ತವಾದ ಭಾಷೆಯಲ್ಲಿ ರಚಿಸಲ್ಪಟ್ಟ ಕೆಲವು ಪ್ರಮುಖ ಪ್ರಶ್ನೆಗಳನ್ನು ಪಠ್ಯಕ್ರಮವು ಮುಂದಿಡುತ್ತದೆ.* ಇವು ಪಠ್ಯಪುಸ್ತಕಗಳ ಪ್ರಶ್ನೆಗಳಾಗಿರದೆ ಮಕ್ಕಳು ಕೆಲವು ನಿರ್ದಿಷ್ಟ ರೀತಿಗಳಲ್ಲಿ ಆಲೋಚಿಸಲು ಸಹಾಯವಾಗಲು ಒದಗಿಸಬೇಕಾದ ಬೆಂಬಲದ ಸ್ವರೂಪಕ್ಕೆ ಸಲಹೆಗಳಾಗಿವೆ. ಉದಾಹರಣೆಗೆ, 'ಸಸ್ಯಗಳು' ಅಥವಾ 'ಪ್ರಾಣಿಗಳು' ಎಂದರೆ ತಮ್ಮದೇ ಆದ ರೀತಿಯಲ್ಲಿ ಹೇಗೆ ಅರ್ಥ ಮಾಡಿಕೊಳ್ಳುತ್ತಾರೆ ಎನ್ನುವಂತಹ ಚಿಂತನೆಗಳನ್ನುಅಭಿವ್ಯಕ್ತಗೊಳಿಸುವಂತೆ ಮಕ್ಕಳಿಗೆ ಸಹಾಯ ಮಾಡಲು ಇದು ವಿಶೇಷವಾಗಿ ಮುಖ್ಯವಾಗುತ್ತದೆ. ವಿಭಿನ್ನ ಸಂದರ್ಭಗಳಲ್ಲಿ ಮತ್ತು ಪ್ರದೇಶಗಳಲ್ಲಿ ಬರೆಯಲ್ಪಟ್ಟಂತಹ ಪಠ್ಯ ಪುಸ್ತಕಗಳು ವಿಭಿನ್ನವಾಗಿರುತ್ತವೆ ಮತ್ತು ಖಂಡಿತವಾಗಿಯೂ ಅವು ತಮ್ಮದೇ ಆದ ನಿರ್ದಿಷ್ಟ ಕಾಳಜಿಗಳನ್ನು ಪ್ರತಿಬಿಂಬಿಸಲೇಬೇಕು. ಆದಾಗ್ಯೂ, ಅವಲೋಕಿಸಲು, ಹೋಲಿಕೆ ಮಾಡಲು, ನಿರ್ದಿಷ್ಟ ವಿದ್ಯಮಾನಗಳು ಅಥವಾ ಪ್ರಕ್ರಿಯೆಗಳನ್ನು ನಿರೀಕ್ಷೆಮಾಡಲು ಮತ್ತು ವಿಶ್ಲೇಷಿಸಲು ಮಕ್ಕಳಿಗೆ ಹೇಗೆ ಮಾರ್ಗದರ್ಶನ ನೀಡಬೇಕು ಎನ್ನುವುದನ್ನು ಪಠ್ಯಪುಸ್ತಕವನ್ನು ರಚಿಸುವವರಿಗೆ ತಿಳಿಸಲು ಅಂತಹ ಪ್ರಶ್ನೆಗಳು ಬಹಳ ಮಹತ್ವವಾಗುತ್ತವೆ. ಉದಾಹರಣೆಗೆ, ಆಹಾರ ನಿರೂಪಣಾ ವಿಷಯದ ಅಡಿಯಲ್ಲಿ "ನಮಗೆ ಬಿಸಿಯೂಟವನ್ನು ಯಾರು ಕೊಡುತ್ತಾರೆ?" ಎನ್ನುವ ಪ್ರಶ್ನೆ ಇದೆ. ಇದೊಂದು ವಿಸ್ತೃತ ಚಿಂತನೆಯ ಪ್ರಶ್ನೆಯಾಗಿದೆ. ಅಂದರೆ ಇದು ಮಕ್ಕಳು ಎದುರಿಗೆ ಮೂರ್ತ ಸ್ವರೂಪದಲ್ಲಿರುವ ನಿರ್ದಿಷ್ಟ ವ್ಯಕ್ತಿಯನ್ನೂ ಮೀರಿ ಕೆಲವು ನಿರ್ದಿಷ್ಟ ಸೇವೆಗಳನ್ನು ಒದಗಿಸುವ ಸೇವಾ ಸಂಸ್ಥೆಗಳು ಮತ್ತು ಸಂಸ್ಥೆಗಳ ಬಗ್ಗೆ ಯೋಚಿಸುವಂತೆ ಅವರನ್ನು ಪ್ರೋತ್ಸಾಹಿಸುತ್ತದೆ. ಹೀಗೆ ಅವರು ಅಂಚೆ ಕಚೇರಿ, ಆಸ್ಪತ್ರೆ ಅಥವಾ ಶಾಲೆಗಳನ್ನು ಸಂಸ್ಥೆಗಳನ್ನಾಗಿ ಅಲೋಚಿಸಲು ತೊಡಗಿದಾಗ, ಅದು ಮುಂದೆ ಹೇಳಿಕೆಗಳ ಅಥವಾ ಮಾಹಿತಿಗಳ ರೂಪದಲ್ಲಿ ಅವರಿಗೆ ಸಹಜವಾಗಿ ಎದುರಾಗುವ ಮತ್ತು ಅವರಿಗೆ ಗ್ರಹಿಸಲು ಸಾಧ್ಯವಾಗದಿರುವ ಆಳ್ವಿಕೆ ಅಥವಾ ' ಸರ್ಕಾರ'ದಂತಹ ವಿಚಾರದ ಬಗ್ಗೆ ಅಮೂರ್ತ ಪರಿಕಲ್ಪನೆಗಳನ್ನು ಅವರು ಬೆಳೆಸಿಕೊಳ್ಳುವುದಕ್ಕೆ ಅವರಿಗೆ ನಂತರದಲ್ಲಿ ಸಹಾಯಕವಾಗುತ್ತದೆ. ಹೀಗೆ, ಮಕ್ಕಳ ಮನಸ್ಸಿನಲ್ಲಿ ಅವರದೇ ಆದ ಪ್ರತ್ಯಕ್ಷ ಅನುಭವಗಳ ಬಗ್ಗೆ ಸೂಕ್ತವಾದ ಸಂಬಂಧಗಳನ್ನು ಮತ್ತು ಕೊಂಡಿಗಳನ್ನು ಮೂಡಿಸುತ್ತಾ ಹೋದರೆ ಮುಂದೆ ಅವರು ಹೆಚ್ಚು ಅಮೂರ್ತವಾದ ಅಥವಾ ಸಂಕೀರ್ಣವಾದ ಪರಿಕಲ್ಪನೆಗಳು ಮತ್ತು ವಾದಗಳನ್ನು ಅರ್ಥ ಮಾಡಿಕೊಳ್ಳುವ ಸಾಮರ್ಥ್ಯವನ್ನು ಪಡೆದುಕೊಳ್ಳುತ್ತಾರೆ.

ಪ್ರತಿಯೊಂದು ನಿರೂಪಣಾ ವಿಷಯದ ಮಾತೃಕೆಯೂ ಉತ್ತರ ಸೂಚಕ ಪ್ರಶ್ನೆಗಳನ್ನು, ಪ್ರಮುಖ ಪರಿಕಲ್ಪನೆಗಳನ್ನು ಮತ್ತು ಸೂಚಿತ ಸಂಪನ್ಮೂಲಗಳನ್ನು ಹಾಗೂ ಚಟುವಟಿಕೆಗಳನ್ನೂ ಕೂಡ ಒಳಗೊಂಡಿದೆ. ಹೆಸರೇ ಸೂಚಿಸುವ ಹಾಗೆ ಒಂದು ನಿರ್ದಿಷ್ಟ

ನಿರೂಪಣಾ ವಿಷಯವನ್ನು ಹೇಗೆ ಪರಿಗಣಿಸಬಹುದು ಎನ್ನುವುದರ ಬಗ್ಗೆ ಒಂದು ಕಲ್ಪನೆಯನ್ನು ಶಿಕ್ಷಕರಿಗೆ ಮತ್ತು ಪಠ್ಯ ಪುಸ್ತಕ ರಚಿಸುವವರಿಗೆ ನೀಡಲು ಇವು ಕೇವಲ ಸೂಚನೆಗಳಾಗಿವೆ. ಈ ಪಠ್ಯಕ್ರಮದ ರಚನೆಯನ್ನು ಆಧರಿಸಿರುವ ವಿವಿಧ ಪಠ್ಯಪುಸ್ತಕಗಳು ನಿರೂಪಣಾ ವಿಷಯಗಳನ್ನು ವಿಶದೀಕರಣಕ್ಕೆ ಸಂಬಂಧಿಸಿದಂತೆ ಅತ್ಯಂತ ವೈವಿಧ್ಯವಾಗಿರುತ್ತವೆ ಎಂಬುದು ಸ್ಪಷ್ಟವಾಗಿದೆ. ಪ್ರತಿಯೊಂದು ರಚನೆಗೂ ಅದರದೇ ಆದ ತಳಹದಿ ಮತ್ತು ತನ್ನದೇ ಆದ ಸ್ಥಿರತೆಯನ್ನು ಹೊಂದುವ ಅಗತ್ಯವಿರುವಂತೆಯೇ ಅಂತಿಮವಾಗಿ ಪ್ರತಿಯೊಂದು ಮಗುವೂ ಕೂಡ ತನ್ನದೇ ಆದ ಗ್ರಹಿಕೆ, ಅಭಿವ್ಯಕ್ತಿ, ಜ್ಞಾನ ಮತ್ತು ಕೌಶಲಗಳನ್ನು ರಚಿಸಿಕೊಳ್ಳಬೇಕಾದ ಅಗತ್ಯವಿರುತ್ತದೆ. ಮಕ್ಕಳು ನಾವು ಎಚ್ಚರಿಕೆಯಿಂದ ಪಟ್ಟಿ ಮಾಡಿಟ್ಟುಕೊಂಡಿರುವ ಪ್ರಮುಖ ಪರಿಕಲ್ಪನೆಗಳ ಬಗ್ಗೆ 'ಮಾಹಿತಿಯನ್ನು' ತುಂಬಿಸಿಕೊಳ್ಳುವ ಖಾಲಿ ಸ್ಲೇಟಾಗಲಿ ಅಥವಾ ಪಾತ್ರೆಯಾಗಲಿ ಆಗಿರುವುದಿಲ್ಲ ಮತ್ತು ಮಯಸ್ಕರು, ಎಷ್ಟೇ ಅಭಿವ್ಯಕ್ತಿಶೀಲರಾಗಿರಲಿ, ಮಕ್ಕಳು ಅವರು ಹೇಳುವುದನ್ನು ನಿಷ್ಕ್ರಿಯರಾಗಿ ಕೇಳಿಸಿಕೊಳ್ಳುತ್ತಾ ಕಲಿಯುವುದಿಲ್ಲ ಎನ್ನುವುದು ನಮಗೆ ತಿಳಿದಿದೆ. ಮಗುವಿನ ಬೆಳವಣಿಗೆಯ ಸಾಧ್ಯ ವಲಯದ ಕಡೆ ಗಮನ ಹರಿಸದೆ 'ಮಾಹಿತಿ' ಕೊಡುವುದನ್ನು- ಹಾಗೆ ಮಾಡಬೇಕು ಎನ್ನುವುದಕ್ಕೆ ಸಮರ್ಥನೆ ಏನೇ ಇರಲಿ - ಆಧರಿಸಿರುವ ನಮ್ಮ ಸಾಂಪ್ರದಾಯಿಕ ವ್ಯವಸ್ಥೆಯ ಮೂಲಭೂತ ಸಮಸ್ಯೆ ಇದಾಗಿದೆ. ಅದರಿಂದ ತಪ್ಪಿಸಿಕೊಳ್ಳುವ ಪ್ರಶ್ನೆಯೇ ಇಲ್ಲ ಎನ್ನುವದು ನಿಜ : ಮಕ್ಕಳು ಒಂದು ಕಲ್ಪನೆಯನ್ನು ಅರ್ಥ ಮಾಡಿಕೊಳ್ಳಬೇಕೆಂದರೆ ಅವರು ತಾವೇ ಸ್ವತಃ ತಮಗೆ ಜ್ಞಾನವನ್ನು ರಚಿಸಿಕೊಳ್ಳಬೇಕು. ಇದು ಸಾಧ್ಯವಾಗುವುದು ಅವರು ಈಗಾಗಲೇ ಹೊಂದಿರುವ ಗ್ರಹಿಕೆಯನ್ನು ಹೊಸ ಗ್ರಹಿಕೆಗಳಿಗೆ ಸಂಬಂಧಿಸಲು ಅಗತ್ಯವಾದ ಮತ್ತು ಸೂಕ್ತವಾದ ಸುಳಿವುಗಳು ಸಿಕ್ಕಾಗ ಮಾತ್ರ. ಮಕ್ಕಳಿಗೆ ತಮ್ಮ ವಿವಿಧ ಜ್ಞಾನ ವ್ಯವಸ್ಥೆಗಳೊಂದಿಗೆ ಸಂಬಂಧ ಕಲ್ಪಿಸಿಕೊಳ್ಳಲು ಸಹಾಯಕವಾಗುವ ಅಂತಹ ಸುಳಿವುಗಳನ್ನು ಈ ಪಠ್ಯಕ್ರಮವು ಗುರುತಿಸುತ್ತದೆ. ನಮ್ಮ ಮಕ್ಕಳಿಗೆ ಸಾಕಷ್ಟು ಗೊತ್ತಿದೆ ಮತ್ತು ಅವರು ಸಾಕಷ್ಟು ಕಲಿಯಬಲ್ಲರು; ಅವರು ಅದನ್ನು ಆದಷ್ಟು ಚೆನ್ನಾಗಿ ಮಾಡುವಂತೆ ಸಹಾಯ ಮಾಡುವುದು ನಮ್ಮ ಜವಾಬ್ದಾರಿಯಾಗಿದೆ.

## ಯಾವ ಕಲಿಕೆಯನ್ನು ನಾವು ನಿರೀಕ್ಷಿಸುತ್ತೇವೆ?

*ನಮ್ಮ ಎಲ್ಲಾ* ಮಕ್ಕಳಿಗೆ ಅಂದರೆ, ಶಾಲೆಗೆ ಹೋಗಲು ಕಷ್ಟಪಡುತ್ತಿರುವ ಎಲ್ಲ ಮಕ್ಕಳು, ಮತ್ತು ಇನ್ನೂ ಹಾಗೆ ಮಾಡಲಾಗದ ಮಕ್ಕಳು; ಮತ್ತು ಶಾಲೆಗೆ ಹೋಗುವುದೇ ಬದುಕಿನ ಮುಖ್ಯ ಉದ್ದೇಶವನ್ನಾಗಿ ಮಾಡಿಕೊಂಡ ಮಕ್ಕಳು, ಹಾಗೆಯೆ ಜೀವನವನ್ನು ಅರ್ಥಪೂರ್ಣವಾಗಿ ಮತ್ತು ಘನತೆಯೊಂದಿಗೆ ಬೆಂಬಲಿಸಬಹುದಾದಂತಹ ಶಾಲೆಯನ್ನು ಬಯಸುವ ಮಕ್ಕಳು, ಈ ಎಲ್ಲ ಮಕ್ಕಳಿಗೆ ಪರಿಸರ ಅಧ್ಯಯನಗಳು ಹೇಗೆ ಸಹಾಯ ಮಾಡಬಹುದು? ಈ ದಾಖಲೆಯು 3ರಿಂದ 5ನೇ ತರಗತಿಯವರೆಗೆ ನಿರೂಪಣಾ ವಿಷಯ ಮತ್ತು ಉಪನಿರೂಪಣಾ ವಿಷಯಗಳ ಸೂಚಕ ಮಾತೃಕೆಯನ್ನು ಒದಗಿಸುತ್ತದೆ. ಪ್ರತಿ ಮಗುವಿಗೂ, ಅದು ಎಲ್ಲೇ ಇರಲಿ, ಒಂದು *ಕಲಿಕಾ ಪರಿಸರ*ವನ್ನು ರೂಪಿಸಲು ಅನುವು ಮಾಡಿಕೊಡುವಂತ ಪಠ್ಯಪುಸ್ತಕಗಳನ್ನಾಗಿ ಕಲಿಕಾ ಸಾಮಾಗ್ರಿಗಳನ್ನಾಗಿ ಮತ್ತು ತರಗತಿಯ ಚಟುವಟಿಕೆಗಳನ್ನಾಗಿ ಇದನ್ನು ರೂಪಾಂತರಿಸಲು ಪಠ್ಯಪುಸ್ತಕ ಬರಹಗಾರರಿಗೆ ಮತ್ತು ಶಿಕ್ಷಕರಿಗೆ ಬಿಟ್ಟದ್ದಾಗಿದೆ. ಇದಕ್ಕಿಂತ ಮೊದಲಿನ ವರ್ಷಗಳಲ್ಲೂ ಕೂಡ ಮಕ್ಕಳು, ಅದಕ್ಕಾಗಿ ಪ್ರತ್ಯೇಕವಾದ ವಿಷಯವಿಲ್ಲದಿದ್ದರೂ, ಪರಿಸರದ ಬಗ್ಗೆ ಕಲಿಯುತ್ತಾರೆ. 1 ಮತ್ತು 2ನೇ ತರಗತಿಗಳಲ್ಲಿ ಭಾಷೆ ಮತ್ತು ಗಣಿತದಂತಹ ಎರಡು ವಿಷಯಗಳು ವಿಶಾಲವಾಗಿ ಪರಿಸರ

ಅಧ್ಯಯನಗಳಿಗೆ ಸಂಬಂಧಿಸಿದ ಪರಿಕಲ್ಪನೆಗಳು ಮತ್ತು ಕೌಶಲಗಳನ್ನು ಅಭಿವೃದ್ಧಿಪಡಿಸಲು ಕೆಲವು ನಿರೂಪಣಾ ವಿಷಯಗಳನ್ನು ಒಳಗೊಂಡಿರುತ್ತವೆ ಎಂಬ ನಿರೀಕ್ಷೆ ಇದೆ.

ಈ ಪಠ್ಯಕ್ರಮದ ಸ್ವರೂಪವು ಉದ್ದೇಶಪೂರ್ವಕವಾಗಿಯೆ ಪ್ರತಿಯೊಂದು ನಿರೂಪಣಾ ವಿಷಯಕ್ಕೆ ಸ್ಪಷ್ಟವಾಗಿ ಯಾವುದೇ ಫಲಿತಾಂಶಗಳನ್ನು ಸೂಚಿಸುವುದಿಲ್ಲ. ಪ್ರತಿಯೊಂದು ನಿರೂಪಣಾ ವಿಷಯ ಕ್ಷೇತ್ರ ಸಂಬಂಧಿತ ಪ್ರಮುಖ ಪರಿಕಲ್ಪನೆಗಳಿಗೆ, ಕೌಶಲಗಳು ಮತ್ತು ಚಟುವಟಿಕೆಗಳನ್ನು ಸೂಕ್ತವಾದ ಕಡೆಯಲ್ಲಿ ಸ್ಪಷ್ಟವಾಗಿ ಸೂಚಿಸಲಾಗಿದೆ. ಆದಾಗ್ಯೂ, ಈ ಎಲ್ಲ ಚಟುವಟಿಕೆಗಳು ಮತ್ತು ಚರ್ಚೆಗಳು ನಡೆಯುವುದನ್ನು ಶಾಲೆಗಳು ಖಾತ್ರಿಪಡಿಸಬೇಕು, ಏಕೆಂದರೆ ಹಾಗಾದಲ್ಲಿ ಮಾತ್ರ ಕಲಿಕೆಯನ್ನು ಖಾತ್ರಿಪಡಿಸಲು ಸಾಧ್ಯ. ಉದಾಹರಣೆಗೆ, ಹಲವು ಕಡೆಗಳಲ್ಲಿ ಚಟುವಟಿಕೆಗಳು ಮಕ್ಕಳು ನಿರ್ದಿಷ್ಟವಾದ ಅವಲೋಕನಗಳನ್ನು ಮಾಡಬೇಕು ಎನ್ನುವುದನ್ನು ಸೂಚಿಸುತ್ತವೆ. ಒಂದೇ ರೀತಿ ಕಾಣುವ ಎರಡು ವಸ್ತುಗಳ ನಡುವೆ ಇರುವ ಸಮಾನ ಅಂಶಗಳನ್ನು ಕೆಲವೊಮ್ಮೆ ಗುರುತಿಸುವುದು ಕಷ್ಟವಾದರೂ ಅವುಗಳ ನಡುವಿನ ಸಣ್ಣ ವ್ಯತ್ಯಾಸಗಳನ್ನೂ ಗುರುತಿಸುವಷ್ಟು ಎಳೆಯ ಮಕ್ಕಳ ಇಂದ್ರಿಯಶಕ್ತಿಗಳು ಚುರುಕಾಗಿರುತ್ತದೆ ಎನ್ನುವುದು ನಮಗೆ ತಿಳಿದಿದೆ. ಆದಾಗ್ಯೂ, ಪರಿಸರ ಅಧ್ಯಯನಗಳಲ್ಲಿ 'ಅವಲೋಕನ' ಚಟುವಟಿಕೆಗಳನ್ನು ನಡೆಸುವ ಉದ್ದೇಶ ವಸ್ತುಗಳ ನಡುವಿನ ವ್ಯತ್ಯಾಸ ಅಥವಾ ಹೋಲಿಕೆಗಳನ್ನು ಯಾದೃಚ್ಛಿಕವಾಗಿ ಸಂಗ್ರಹಿಸುವುದಾಗಿರುವುದಿಲ್ಲ, ಬದಲಿಗೆ *ಮಕ್ಕಳ ಕಲ್ಪನೆಗಳು ಹಾಗೂ ಗ್ರಹಿಕೆಯನ್ನು ವಿಸ್ತೃತಗೊಳಿಸುವ ಸಲುವಾಗಿ ವಸ್ತುವಿನಿಂದ ಮಾಹಿತಿಯನ್ನು ಪಡೆದುಕೊಳ್ಳುವುದಾಗಿರುತ್ತದೆ.* ಉದಾಹರಣೆಗೆ, ನಿರ್ದಿಷ್ಟವಾಗಿ ಎಲೆಗಳ ಅಕೃತಿ, ಅವುಗಳ ಅಂಚು, ಗೆರೆಗಳ ವಿನ್ಯಾಸ ಇತ್ಯಾದಿಗಳನ್ನು ನೋಡುವುದು ಅವುಗಳ ಬಗ್ಗೆ ಮತ್ತಷ್ಟು ತಿಳಿದುಕೊಳ್ಳುವ ಸಲುವಾಗಿ. ಹೀಗೆ *ಚಟುವಟಿಕೆಗಳನ್ನು ವಿನ್ಯಾಸಗೊಳಿಸುವಾಗ ಅವುಗಳ ನಿರ್ದಿಷ್ಟ ಉದ್ದೇಶಗಳನ್ನು ಸ್ಪಷ್ಟವಾಗಿ ತಿಳಿಸಬೇಕು.* ಹಾಗೆಯೆ, ಚಿಕ್ಕ ಮಕ್ಕಳು ಅವರ ಬೆಳವಣಿಗೆಗೆ ಸಹಾಯಕವಾಗುವ ಹಲವು ಪ್ರಶ್ನೆಗಳನ್ನು ಕೇಳುತ್ತಾರೆ, ಆದರೆ ಅವುಗಳೆಲ್ಲವೂ ಆಳವಾದವುಗಳಲ್ಲ ಮತ್ತು ಅವು ಆ ಹಂತದಲ್ಲಿ ಅರ್ಥ ಮಾಡಿಕೊಳ್ಳಲು ಸಾಧ್ಯವಾಗದಂತಹವು. ಆದಾಗ್ಯೂ, ಯೋಜಿತ ಚಟಟುವಟಿಕೆಗಳ ಮತ್ತು ಪ್ರಯೋಗಗಳ ಮೂಲಕ ಅವರು ತಮ್ಮ ಪ್ರಶ್ನೆಗಳನ್ನು ರೂಪಿಸಲು, ಉತ್ತರಿಸಲು, ಚರ್ಚಿಸಲು ಮತ್ತು ಶೋಧಿಸುವಂತೆ ಮಾಡಿ ವಿಭಿನ್ನ ಮಟ್ಟದ ತಾರ್ಕಿಕಶಕ್ತಿ ಮತ್ತು ಸಂಶೋಧನೆಯನ್ನು ಬೇಡುವ *ಸಂಕೀರ್ಣವಾದ ಪ್ರಶ್ನೆಗಳನ್ನು ಮಕ್ಕಳು ಹಂತಹಂತವಾಗಿ ಕೇಳಲು ಸಮರ್ಥರಾಗುವಂತೆ ಪರಿಸರ ಅಧ್ಯಯನಗಳ ತರಗತಿಗಳು ಮಕ್ಕಳಿಗೆ ಅವಕಾಶಗಳನ್ನು ಕಲ್ಪಿಸಿಕೊಡಬೇಕು.* ಇವು *ಪರಿಸರ ಅಧ್ಯಯನಗಳಲ್ಲಿನ* ಕಲಿಕಾ ಪ್ರಕ್ರಿಯೆಯ ಮೂಲಭೂತವಾದವುಗಳಾದರೂ ದುರದೃಷ್ಟವಶಾತ್ ಇದನ್ನು ಖಾತ್ರಿಗೊಳಿಸುವ ರೀತಿಯಲ್ಲಿ ಬಹಳಷ್ಟು ತರಗತಿಗಳನ್ನು ವಿನ್ಯಾಸಗೊಳಿಸಿರುವುದಿಲ್ಲ. ಹಾಗಿದ್ದಾಗ ಎಲ್ಲ ಮಕ್ಕಳು ಕಲಿಯಬೇಕು ಎಂದು ನಾವು ಹೇಗೆ ನಿರೀಕ್ಷಿಸಲು ಸಾಧ್ಯ? ಈ ಹಂತದಲ್ಲಿ ಯಾವುದೇ ನಿರ್ದಿಷ್ಟ ಫಲಿತಾಂಶಗಳನ್ನು ಸೂಚಿಸುವುದರಲ್ಲಿ ಏನಾದರೂ ಅರ್ಥವಿದೆಯೇ?

ಈ ಕೆಳಗಿನ ಉದಾಹರಣೆಯ ಮೂಲಕ ಈ ಪಠ್ಯಕ್ರಮವನ್ನು ರಚಿಸುವ ಉದ್ದೇಶವನ್ನು ನಾವು ಮತ್ತೊಮ್ಮೆ ಸ್ಪಷ್ಟಪಡಿಸುತ್ತಿದ್ದೇವೆ:

## ವಿದ್ಯಾರ್ಥಿಗಳಿಗೆ ಗೊತ್ತಿರುವ ಜೀವವಿಜ್ಞಾನ ಯಾವುದು?

ಜನಾಬಾಯಿ ಸಹ್ಯಾದ್ರಿ ತಪ್ಪಲಿನಲ್ಲಿರುವ ಒಂದು ಸಣ್ಣ ಹಳ್ಳಿಯಲ್ಲಿ ವಾಸಿಸುತ್ತಿದ್ದಾಳೆ. ಅವಳು ತನ್ನ ತಂದೆ ತಾಯಿಗಳಿಗೆ ಋತುಮಾನದ ಬೆಳೆಗಳಾದ ಭತ್ತ ಮತ್ತು 'ತೊಗರಿ ' ಬೇಳೆಯನ್ನು

ಬೆಳೆಯಲು ಸಹಾಯ ಮಾಡುತ್ತಾಳೆ. ಅವಳು ಕೆಲವು ಬಾರಿ ಆಡುಗಳನ್ನು ಮೇಯಿಸಲು ಸಹೋದರನೊಂದಿಗೆ ಹೋಗುತ್ತಾಳೆ. ಅವಳು ತನ್ನ ತಂಗಿ ಬೆಳೆಯಲು ಸಹಾಯ ಮಾಡಿರುತ್ತಾಳೆ. ಇತ್ತೀಚಿನ ದಿನಗಳಲ್ಲಿ ಅವಳು ಹತ್ತಿರದಲ್ಲಿರುವ ಮಾಧ್ಯಮಿಕ ಶಾಲೆಗೆ ಕಲಿಯಲು ಪ್ರತಿದಿನ 8 ಕಿ.ಮಿ. ನಡೆದುಹೋಗುತ್ತಾಳೆ.

ಅವಳು ತನ್ನ ನೈಸರ್ಗಿಕ ಪರಿಸರದೊಂದಿಗೆ ಅತ್ಯಂತ ಆಪ್ತ ಸಂಬಂಧವನ್ನು ಇಟ್ಟುಕೊಂಡಿದ್ದಾಳೆ. ಅವಳು ಆಹಾರಕ್ಕಾಗಿ, ಔಷಧಿಗಳಿಗಾಗಿ, ಸೌದೆಗಾಗಿ, ಬಣ್ಣಕ್ಕಾಗಿ ಮತ್ತು ಕಟ್ಟಡದ ಕೆಲಸಕ್ಕಾಗಿ ವಿವಿಧ ಸಸ್ಯ/ಮರಗಳನ್ನು ಬಳಸಿದ್ದಾಳೆ; ಮನೆಯ ಉದ್ದೇಶಗಳಿಗೆ, ಧಾರ್ಮಿಕ ವಿಧಿಗಳಿಗೆ ಮತ್ತು ಹಬ್ಬಗಳನ್ನು ಆಚರಿಸುವ ಉದ್ದೇಶಕ್ಕಾಗಿ ಬಳಸಿದ ಸಸ್ಯಗಳ ವಿವಿಧ ಭಾಗಗಳನ್ನು ಅವಳು ಹತ್ತಿರದಿಂದ ಗಮನಿಸಿದ್ದಾಳೆ. ಅವಳು ಮರಗಳಲ್ಲಿರುವ ಅತ್ಯಂತ ಸೂಕ್ಷ್ಮ ವ್ಯತ್ಯಾಸಗಳನ್ನು ಗುರುತಿಸಬಲ್ಲಳು, ಆಕಾರ, ಗಾತ್ರ, ಎಲೆಗಳು ಮತ್ತು ಹೂವುಗಳ ಹರಡುವಿಕೆ, ವಾಸನೆ ಮತ್ತು ಮೇಲ್ಮೈ ವಿನ್ಯಾಸಗಳ ಆಧಾರದ ಮೇಲೆ ಋತುಮಾನದ ಬದಲಾವಣೆಗಳನ್ನು ಗಮನಿಸುತ್ತಾಳೆ. ತನ್ನ ಸುತ್ತಮುತ್ತಲಿರುವ ಸುಮಾರು ನೂರು ವಿವಿಧ ರೀತಿಯ ಸಸ್ಯಗಳನ್ನು ಅವಳು, ಜನಾಬಾಯಿ ಬುದ್ಧಿವಂತ ವಿದ್ಯಾರ್ಥಿಯಲ್ಲ ಎಂದು ನಂಬಿರುವ ಮತ್ತು "ಈ ಹುಡುಗರಿಗೆ ವಿಜ್ಞಾನ ಅರ್ಥವಾಗುವುದಿಲ್ಲ, ಅವರು ಅವಕಾಶ ವಂಚಿತ ಹಿನ್ನಲೆಯಿಂದ ಬಂದಿರುತ್ತಾರೆ" ಎಂದು ಹೇಳುವ ಅದೇ ತನ್ನ ಜೀವವಿಜ್ಞಾನದ ಶಿಕ್ಷರಿಗಿಂತ ಹೆಚ್ಚಾಗಿ, ಗುರುತಿಸಬಲ್ಲಳು .

ತನ್ನಲ್ಲಿರುವ ಶ್ರೀಮಂತವಾದ ಗ್ರಹಿಕೆಯನ್ನು ಜೀವವಿಜ್ಞಾನದ ಔಪಚರಿಕ ಪರಿಕಲ್ಪನೆಗಳಾಗಿ ರೂಪಾಂತರಿಸಲು ಜನಬಾಯಿಗೆ ನಾವು ಸಹಾಯ ಮಾಡಬಹುದೇ? ಶಾಲೆಯ ವಿಜ್ಞಾನವೆಂದರೆ ಉದ್ದದ ಪಠ್ಯಗಳಲ್ಲಿ ಮತ್ತು ಕಷ್ಟದ ಭಾಷೆಯಲ್ಲಿ ಇಟ್ಟಿರುವ ಅಮೂರ್ತ ಜಗತ್ತಿನ ಸಂಕೇತಗಳಲ್ಲ: ಅದು ಅವಳು ಕೆಲಸ ಮಾಡುವ ತೋಟಕ್ಕೆ, ಅವಳಿಗೆ ಗೊತ್ತಿರುವ ಮತ್ತು ನೋಡಿಕೊಳ್ಳುವ ಪ್ರಾಣಿಗಳಿಗೆ ಮತ್ತು ಅವಳು ಪ್ರತಿದಿನ ನಡೆದು ಬರುತ್ತಿರುವ ಕಾಡಿಗೆ ಸಂಬಂಧಿಸಿದ್ದು ಎನ್ನುವುದನ್ನು ಅವಳಿಗೆ ನಾವು ಮನದಟ್ಟು ಮಾಡಿಕೊಡಬಹುದೇ? (*ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟು 2005, ಪು. 45)*

## ತರಗತಿ III

### ಪರಿಸರ ಅಧ್ಯಯನಗಳು

| ಪ್ರಶ್ನೆಗಳು | ಪ್ರಮುಖ ಪರಿಕಲ್ಪನೆಗಳು/ ಚರ್ಚಾಂಶಗಳು | ಸೂಚಿತ ಸಂಪನ್ಮೂಲಗಳು | ಸೂಚಿತ ಚಟುವಟಿಕೆಗಳು |
| --- | --- | --- | --- |
| **1. ಕುಟುಂಬ ಮತ್ತು ಸ್ನೇಹಿತರು**<br>**1.1 ಸಂಬಂಧಗಳು**<br>***ನನ್ನ ಕುಟುಂಬ***<br>ನಿಮ್ಮ ಮನೆಯಲ್ಲಿ ನಿಮ್ಮ ಜೊತೆ ಯಾರು ಯಾರೆಲ್ಲಾ ಇದ್ದಾರೆ? ಅವರ ಪರಸ್ಪರ ಸಂಬಂಧವೇನು? ನಿಮ್ಮ ಜೊತೆ ವಾಸಿಸದೆ ಇರುವ ಸಂಬಂಧಿಕರು ನಿಮಗೆ ಇದ್ದಾರೆಯೆ? ಅವರು ಯಾವಾಗಲೂ ಅಲ್ಲಿಯೇ ಇದ್ದರೆ? ನಿಮ್ಮ ಅಜ್ಜ ಅಜ್ಜಿಯರಿಗೆ ಎಷ್ಟು ಜನ ಮಕ್ಕಳು? ನಿಮ್ಮ ಪ್ರಕಾರ ಭವಿಷ್ಯದಲ್ಲಿ ನಿಮ್ಮ ಹೊಸ ಸಂಬಂಧಿಕರು ಯಾರಾಗಬಹುದು? | ಕುಟುಂಬದ ಪರಿಕಲ್ಪನೆ; ಕುಟುಂಬದ ವಿಧಗಳಲ್ಲಿ ಇರುವ ವೈವಿಧ್ಯತೆ; ಒಂದು ಆಸರೆಯ ವ್ಯವಸ್ಥೆಯಾಗಿ ಕುಟುಂಬ; ಸಂಬಂಧಗಳ ಬಗ್ಗೆ ಇರುವ ಕಲ್ಪನೆಗಳು; ಸರಳ ವಂಶವೃಕ್ಷ (ಮೂರು ತಲೆಮಾರಿನದು). | ಮಗುವಿನ ದಿನನಿತ್ಯ ಬದುಕಿನ ಅನುಭವ; ಕುಟುಂಬದ ಸದಸ್ಯರು.<br> | ಅವಲೋಕನ, ಕುಟುಂಬದ ಸಂಬಂಧಗಳ ಬಗ್ಗೆ ಹಿರಿಯರಿಂದ ತಿಳಿದು ಕೊಳ್ಳುವುದು, ಚರ್ಚೆ. |
| ***ನನ್ನ ಕುಟುಂಬ ಮತ್ತು ನಾನು***<br>ನಿಮ್ಮ ಕುಟುಂಬದಲ್ಲಿರುವ ಯಾರದ್ದಾದರೂ ಹೋಲಿಕೆ ನಿಮಗಿದೆಯೆ? ನಿಮ್ಮ ಕುಟುಂಬದ ಯಾರಿಂದಲಾದರೂ ಏನಾದರೂ ಕಲಿತಿದ್ದೀರಾ? ನಿಮ್ಮ ಎಲ್ಲ ಸಂಬಂಧಿಕರಲ್ಲಿ ನೀವು ಯಾರನ್ನು ತುಂಬಾ ಮೆಚ್ಚಿಕೊಳ್ಳುತ್ತೀರಾ? ಅತ್ಯಂತ ಕಾಳಜಿಯನ್ನು ತೋರಿಸುವ ಮತ್ತು ಸಂಯಮದ ವ್ಯಕ್ತಿ | ಕುಟುಂಬದ ಪ್ರಭಾವಗಳು – ದೈಹಿಕ ಗುಣಲಕ್ಷಣಗಳು, ಮೌಲ್ಯಗಳು ಮತ್ತು ಹವ್ಯಾಸಗಳು, ಕುಟುಂಬದ ಸದಸ್ಯರ ಗುಣಗಳನ್ನು ಮತ್ತು ಕೌಶಲಗಳನ್ನು ಮೆಚ್ಚುವುದು. | ಕುಟುಂಬದ ಸದಸ್ಯರು, ಸ್ಥಳೀಯ ಜ್ಞಾನ, ವಿಭಿನ್ನ ಹಬ್ಬಗಳ ಕುರಿತಾದ ಕತೆ/ಪದ್ಯಗಳು. | ಅವಲೋಕನ, ವಿಸ್ತೃತ ಕುಟುಂಬದ ಬಗ್ಗೆ ಹಿರಿಯರಿಂದ ಕೇಳಿ ತಿಳಿದು ಕೊಳ್ಳುವುದು, ಕತೆಗಳನ್ನು ಹೇಳುವುದು/ ಹಬ್ಬಗಳಿಗೆ ಸಂಬಂಧಿಸಿದ ಹಾಡುಗಳನ್ನು ಹಾಡುವುದು, ಯಾವುದಾದರೂ |

| | | | |
|---|---|---|---|
| ಯಾರು? ನಿಮ್ಮ ಜೊತೆ ಇಲ್ಲದೆ ಇರುವ ನಿಮ್ಮ ಕುಟುಂಬದ ಸದಸ್ಯರನ್ನು ನೀವು ಯಾವಾಗ ಭೇಟಿಯಾಗುತ್ತೀರಾ? | ಒಂದು ಆಸರೆಯ ವ್ಯವಸ್ಥೆಯಾಗಿ ಕುಟುಂಬ. | | ಹಬ್ಬದ ಬಗ್ಗೆ ಬರೆಯುವುದು, ಚಿತ್ರ ಬಿಡಿಸುವುದು. |
| ***ನಾನು ಯಾರ ಹಾಗೆ ಕಾಣಿಸುತ್ತಿದ್ದೀನಿ?*** ನಿಮ್ಮ ಕೆಲವು ಸಂಬಂಧಿಕರು ನೋಡಲು ಒಂದೇ ತರಹ ಇದ್ದಾರೆಯೆ? ಯಾವ ಅಂಶವು ಒಂದೇ ರೀತಿ ಇದೆ – ಕಣ್ಣುಗಳು, ಕಿವಿಗಳು, ಧ್ವನಿ ಅಥವಾ ಎತ್ತರ? ನಿಮ್ಮ ಕುಟುಂಬದಲ್ಲಿ ನಿಖರವಾಗಿ ಒಂದೇ ತರ ಕಾಣುವ ಇಬ್ಬರು ಇದ್ದಾರೆಯೆ? | ಸಂಬಂಧಿಕರ ನಡುವೆ ಹೋಲಿಕೆಯ ಪರಿಕಲ್ಪನೆ, ಅನುವಂಶಿಕ ಲಕ್ಷಣಗಳು. | ಕುಟುಂಬದ ಛಾಯಾಚಿತ್ರಗಳು; ಹಿರಿಯರು ಚಿಕ್ಕವರಿದ್ದಾಗಿನ ಅವರ ಕುಟುಂಬದ ಸದಸ್ಯರ ಬಗ್ಗೆ ಆಖ್ಯಾನಗಳು. | ಚರ್ಚೆ, ಕತೆಗಳು/ ಸಿನಿಮಾಗಳು/ ಅವಳಿಗಳನ್ನು ಒಳಗೊಳ್ಳುವ ನಗೆಹನಿಗಳು. |
| ***ವಯಸ್ಸಾದವರು ಮತ್ತು ವಿಕಲಚೇತನರು*** ಕಿವಿ ಕೇಳಿಸದಿರುವ ಜನರು ನಿಮಗೆ ಗೊತ್ತಿರುವರೆ? ಅವರಲ್ಲಿ ಬಹಳಷ್ಟು ಜನರು ವಯಸ್ಸಾದವರೆ? ಸ್ಪಷ್ಟವಾಗಿ ಕೇಳಿಸಿದ/ ಕಾಣಿಸದ ಸ್ನೇಹಿತರು ನಿಮಗಿದ್ದಾರೆಯೆ? ನೀವು ಅವರಿಗೆ ಯಾವುದಾದರೂ ರೀತಿಯಲ್ಲಿ ಸಹಾಯ ಮಾಡುಬಹುದಿತ್ತೆ? ನೀವು ಇಷ್ಟಪಡುವ ಆದರೆ ಇತರರು/ಹಿರಿಯರು ಇಷ್ಟಪಡದಿರುವ ಶಬ್ದಗಳು ಯಾವುದಾದರೂ ಇವೆಯೆ? | ವಯಸ್ಸಾದವರ ಮತ್ತು ವಿಕಲ ಚೇತನರ ಬಗ್ಗೆ ಸೂಕ್ಷ್ಮಶೀಲತೆ; ಶ್ರವಣ ಮತ್ತು ದೃಷ್ಟಿಯ ಇಂದ್ರಿಯ ಶಕ್ತಿಯ ಪರಿಚಯ; ದೇಹಕ್ಕೆ ವಯಸ್ಸಾಗುತ್ತದೆ ಎನ್ನುವ ಸಂಗತಿಯ ಬಗ್ಗೆ ಮತ್ತು ಕೆಲವು ಮಕ್ಕಳಿಗೆ ನೋಡಲು ಮತ್ತು ಕೇಳಲು ಸಾಧ್ಯವೇ ಇಲ್ಲ ಅಥವಾ ಭಾಗಶಃ ಸಮಸ್ಯೆ ಯಿರಬಹುದು ಎನ್ನುವುದರ ಬಗ್ಗೆ ಸೂಕ್ಷ್ಮಗ್ರಾಹಿ ಗಳನ್ನಾಗಿಸುವುದು; | ಭಾರತ್ ವಿಜ್ಞಾನ ಸಮಿತಿಯ "*ಮೆರಿ ಬೆಹನ್ ಸುನ್ ನಹಿ ಸಕ್ತಿ*"ಎನ್ನುವ ಪುಸ್ತಕ ಅಥವಾ ವಿಕಲ ಚೇತನ ಮಕ್ಕಳ ಕುರಿತಾದ ಮತ್ತಾವುದೇ ಪುಸ್ತಕ. | ಓದುವುದು ಮತ್ತು ಚರ್ಚೆ; ವಿವಿಧ ಶಬ್ದಗಳನ್ನು ಮಾಡುವುದು ಮತ್ತು ಅವುಗಳ ಬಗ್ಗೆ ಇಷ್ಟ ಅಥವಾ ಇಷ್ಟವಾಗದೆ ಇರುವುದನ್ನು ವ್ಯಕ್ತಪಡಿಸುವುದು; ಕಣ್ಣು ಮುಚ್ಚಿ ನಟಿಸುವುದು, ಅಂಧರಿಗಾಗಿ ಕೆಲಸ ಮಾಡುವ ಸ್ಥಳೀಯ ಸಂಸ್ಥೆ ಅಥವಾ ಇತರ ಯಾವುದೇ ಸಂಸ್ಥೆಗೆ ಭೇಟಿ ನೀಡುವುದು. |

| | | | |
|---|---|---|---|
| **1.2 ಸಸ್ಯಗಳು**<br>***ನಮ್ಮ ಸುತ್ತಮುತ್ತ ಇರುವ ಸಸ್ಯಗಳು***<br>ನಿಮ್ಮ ಸುತ್ತಮುತ್ತ ಎಷ್ಟು ಬಗೆಯ ಸಸ್ಯಗಳನ್ನು ನೀವು ನೋಡುತ್ತೀರಿ? ಅವುಗಳ ನಡುವೆ ನೀವು ಗಮನಿಸುವ ವ್ಯತ್ಯಾಸಗಳೇನು? ನಿಮ್ಮ ಸುತ್ತಮುತ್ತ ಇರುವ ಯಾವ ವಸ್ತುಗಳನ್ನು ಸಸ್ಯಗಳಿಂದ ಮಾಡಲಾಗಿದೆ? ನಿಮ್ಮ ಅಜ್ಜ ಅಜ್ಜಿಯರು ಚಿಕ್ಕವರಿದ್ದಾಗ ಇಲ್ಲದೆ ಇದ್ದ ಯಾವುದಾದರೂ ಸಸ್ಯಗಳು ಈಗ ನಿಮ್ಮ ಪ್ರದೇಶದಲ್ಲಿವೆಯೆ? ನಿಮ್ಮ ಸುತ್ತ ಇಲ್ಲದೆ ಇರುವ ಯಾವುದಾದರೂ ಸಸ್ಯಗಳು ಅಂದರೆ ನಾವು ತಿನ್ನುವ ಆದರೆ ನಮ್ಮ ಹತ್ತಿರದಲ್ಲೆಲ್ಲೂ ಬೆಳೆಯದ ಸಸ್ಯಗಳು ನಿಮಗೆ ಗೊತ್ತಿವೆಯೆ? | ಬ್ರೇಲ್ ಬಗ್ಗೆ ಮೂಲಭೂತ ಕಲ್ಪನೆ.<br><br>ಒಂದು 'ಸಸ್ಯ'ದ ಬಗ್ಗೆ ಮಕ್ಕಳಿಗಿರುವ ಕಲ್ಪನೆಗಳನ್ನು ಪರಿಶೋಧಿಸುವುದು. ಸಸ್ಯಗಳ ವೈವಿಧ್ಯತೆ; ಗಾತ್ರ, ಅವು ಎಲ್ಲಿ ಬೆಳೆಯುತ್ತವೆ, ಆಕಾರ, ಬಣ್ಣ, ವಾಸನೆ ಇತ್ಯಾದಿ; ದಿನನಿತ್ಯದ ಬದುಕಿಗೆ ಸಸ್ಯಗಳ ಮೇಲಿನ ಅವಲಂಬನೆ. ಹೊಸ ಸಸ್ಯಗಳ/ಬೆಳೆಗಳ ಪರಿಚಯ ಮತ್ತು ಕಾಲಾಂತರದಲ್ಲಿ ಹಿರಿಯರು ಗಮನಿಸಿರುವ ಬದಲಾವಣೆಗಳು. ಸಸ್ಯಗಳು ಮತ್ತು ಹವಾಮಾನ/ ಪರಿಸರ. | ಮಗುವಿನ ದಿನನಿತ್ಯ ಬದುಕಿನ ಅನುಭವ, ಅವಲೋಕನ, ಅಜ್ಜ ಅಜ್ಜಿಯರಿಂದ/ ಹಿರಿಯರಿಂದ ಮಾಹಿತಿ, ಸುತಮುತ್ತಲಿನ ಸ್ಥಳೀಯ ಪರಿಸರಕ್ಕೆ ಅಪರೂಪ ವಾಗಿರುವ ಒಂದು ಸಸ್ಯದ ಮಾದರಿ/ಚಿತ್ರ. | ನಮ್ಮ ಸುತ್ತಲೂ ಇರುವ ವಿಭಿನ್ನವಾದ ಸಸ್ಯಗಳನ್ನು ಅವಲೋಕಿಸುವುದು. ಸರಳವಾದ ಗುಣಲಕ್ಷಣಗಳನ್ನು ಆಧರಿಸಿ ಅವುಗಳ ಹೋಲಿಕೆ ಮತ್ತು ವರ್ಗೀಕರಣ; ಸಸ್ಯಗಳಿಂದ ಮಾಡಿದ ವಸ್ತುಗಳ ಬಗ್ಗೆ ಚರ್ಚೆ, ತೊಗಟೆಗಳ ಪೆನ್ಸಿಲ್ ಮುದ್ರಿಕೆಗಳು, ಮತ್ತು ಎಲೆಯ ಮುದ್ರಿಕೆಗಳು. |
| ***ನಮ್ಮ ಬದುಕಿನಲ್ಲಿ ಎಲೆಗಳು***<br>ನೀವು ನೋಡುವ ವಿವಿಧ ರೀತಿಯ ಎಲೆಗಳಾವುವು? ನೀವು ತಿನ್ನಲು ಸಸ್ಯಗಳ ಎಲೆಗಳನ್ನು ಬಳಸುತ್ತೀರಾ? ಮತ್ತೆ ಯಾವ ಬಗೆಯಲ್ಲಿ ಎಲೆಗಳನ್ನು ಉಪಯೋಗಿಸಲಾಗುತ್ತದೆ? ವರ್ಷದಲ್ಲಿ ಬಹಳಷ್ಟು ಎಲೆಗಳು ನೆಲಕ್ಕೆ ಉದುರುವ ಕಾಲ ಯಾವುದಾದರೂ ಇದೆಯೆ? ಅವುಗಳನ್ನು ಸುಡಲಾಗುತ್ತದೆಯೆ? | ಎಲೆಗಳ ವೈವಿಧ್ಯತೆ – ಬಣ್ಣ, ಆಕಾರ, ಮೇಲ್ಮೈಲಕ್ಷಣ, ವಾಸನೆ ಇತ್ಯಾದಿ. ಋತುಮಾನದಲ್ಲಿ ಎಲೆಗಳ ಉದುರುವಿಕೆ; ಎಲೆಗಳಿಂದ ಕಾಂಪೋಸ್ಟ್. | ಮಗುವಿನ ದಿನನಿತ್ಯ ಬದುಕಿನ ಅನುಭವ, ಅವಲೋಕನ, ಕಾಂಪೋಸ್ಟ್ ಗುಂಡಿಯ ಬಗ್ಗೆ ಒಂದು ಕತೆ | ಅವಲೋಕನ, ವಿವಿಧ ಎಲೆಗಳ ಸಂಗ್ರಹ, ವಿವಿಧ ಸಸ್ಯ ಎಲೆಗಳ ವಾಸನೆಯನ್ನು ನೋಡುವುದು, ಚರ್ಚೆ, ಹತ್ತಿರವಿರುವ ಕಾಂಪೋಸ್ಟ್ ಗುಂಡಿಗೆ ಭೇಟಿ ನೀಡುವುದು, ಎಲೆಯ ವಿಶಿಷ್ಟ |

| | | | |
|---|---|---|---|
| ನೀವು ಕಾಂಪೋಸ್ಟ್ ಗುಂಡಿಯನ್ನು ನೋಡಿದ್ದೀರಾ? ಬಟ್ಟೆಗಳ, ಕುಂಡಗಳ, ಗೋಡೆಗಳ, ಪ್ರಾಣಿಗಳ ಇತ್ಯಾದಿಗಳ ಮೇಲೆ ಯಾವ ಬಗೆಯ ಎಲೆಯ ವಿಶಿಷ್ಟ ಗುರುತುಗಳನ್ನು ನೀವು ನೋಡುತ್ತೀರಾ? ಕೆಲವು ಸಮಾರಂಭಗಳಲ್ಲಿ ನೀವು ನಿಮ್ಮ ಮನೆಯನ್ನು ಎಲೆಗಳಿಂದ ಅಲಂಕರಿಸುತ್ತೀರಾ ? | ವಿವಿಧ ವಸ್ತುಗಳ ಮೇಲೆ ಎಲೆಯ ವಿನ್ಯಾಸಗಳು/ ವಿಶಿಷ್ಟ ಗುರುತುಗಳು. | | ಗುರುತುಗಳಿಂದ ತರಗತಿಗಳನ್ನು ಅಲಂಕರಿಸುವುದು. ಅಂಗೈ ಮೇಲೆ ವಿವಿಧ ವಿನ್ಯಾಸಗಳಲ್ಲಿ *ಮೆಹೆಂದಿ* ಹಚ್ಚಿಕೊಳ್ಳುವುದು. |
| **1.3 ಪ್ರಾಣಿಗಳು**<br>***ಪ್ರಾಣಿಗಳು: ಸಣ್ಣವು ಮತ್ತು ದೊಡ್ಡವು***<br>ನೀವು ನೋಡಿರುವ ಅತ್ಯಂತ ಸಣ್ಣ ಮತ್ತು ಅತ್ಯಂತ ದೊಡ್ಡ ಪ್ರಾಣಿಗಳಾವುವು? ಯಾವುಗಳ ಬಗ್ಗೆ ನೀವು ಕೇವಲ ಕೇಳಿದ್ದೀರಿ? ಯಾವ ಪ್ರಾಣಿಗಳಿಗೆ ಬಾಲಗಳಿವೆ? ಎಷ್ಟು ಕಾಲುಗಳಿವೆ?<br><br>***ಕೆಲವು ಹರಿದಾಡುವ ಕೀಟಗಳು ಮತ್ತು ಹಾರುವಂತಹವುಗಳೂ ಕೂಡ*** | 'ಪ್ರಾಣಿ'ಯ ಕುರಿತು ಮಕ್ಕಳಿಗಿರುವ ಕಲ್ಪನೆಗಳನ್ನು ಪರಿ ಶೋಧಿಸುವುದು. | ಮಗುವಿನ ದಿನನಿತ್ಯ ಬದುಕಿನ ಅನುಭವ, ಅವಲೋಕನ, ಪ್ರಾಣಿಗಳ ಮೇಲಿನ ಕತೆಗಳು/ ಕವನಗಳು (ಎನ್ ಬಿ ಟಿ) | ನಿಮ್ಮ ಸುತ್ತಲೂ ಇರುವ ವೈವಿಧ್ಯ ಪ್ರಾಣಿಗಳನ್ನು ಅವಲೋಕಿ ಸುವುದು, ಪಟ್ಟಿಮಾಡುವುದು. ಅವು ಏನು ತಿನ್ನುತ್ತವೆ, ಅವರು ವಾಸಿಸುವ ಸ್ಥಳದಲ್ಲಿ ಅವರು ನೋಡಿರುವ ಪ್ರಾಣಿಗಳ ಸಾಪೇಕ್ಷ ಗಾತ್ರ, ಪುಸ್ತಕಗಳಲ್ಲಿನ ಚಿತ್ರಗಳು, ಕೇಳಿರುವ ಪ್ರಾಣಿಗಳ ಬಗ್ಗೆ ಚರ್ಚೆ. ಅಚ್ಚುಮೆಚ್ಚಿನ ಪ್ರಾಣಿಗಳ ಚಿತ್ರ ಬಿಡಿಸುವುದು. ಇರುವೆಗಳು, ನೊಣಗಳು, ಜೇಡರಹುಳುಗಳು, ಜೀರುಂಡೆಗಳು, ಜಿರಳೆಗಳು, ಎರೆಹುಳುಗಳು, ಹಲ್ಲಿಗಳು ಮತ್ತು ಇತರ ಪ್ರಾಣಿಗಳ |

| | | | |
|---|---|---|---|
| ಹರಿದಾಡುವ ಎಷ್ಟು ವಿಧದ ಸಣ್ಣ ಪ್ರಾಣಿಗಳು ನಿಮಗೆ ಗೊತ್ತು? ಎಲ್ಲಿ ಮತ್ತು ಯಾವುದರಿಂದ ಅವು ಪ್ರತಿಯೊಂದು ಬಚ್ಚಿಟ್ಟುಕೊಳ್ಳುತ್ತವೆ? ಯಾವ ಕೀಟಗಳು ಹರಿದಾಡುವುದು ಮತ್ತು ಹಾರುವುದು ಎರಡನ್ನೂ ಮಾಡುತ್ತವೆ? ಯಾವುದು ನಮ್ಮನ್ನು ಕಡಿಯುತ್ತವೆ? ನೊಣಗಳಿಂದ ನಮಗೆ ಕಾಯಿಲೆ ಬರುತ್ತದೆಯೆ? ಜೇಡರ ಹುಳು ಏಕೆ ಬಲೆಯನ್ನು ಹೆಣೆಯುತ್ತದೆ? | ಹರಿದಾಡುವ ಪ್ರಾಣಿಗಳು, ಹಾರುವಂತವು ಮತ್ತು ಕೀಟಗಳ ಬಗ್ಗೆ ಮಕ್ಕಳ ಕಲ್ಪನೆಗಳನ್ನು ಪರಿಶೋಧಿವುದು. | ಮಗುವಿನ ದಿನನಿತ್ಯ ಬದುಕಿನ ಅನುಭವ, ಅವಲೋಕನ, ಕೀಟಗಳು, ಹಾರು ವಂತವುಗಳು, ಹರಿದಾಡುವ ಪ್ರಾಣಿಗಳ ಮೇಲಿನ ಕತೆಗಳು/ ಕವನಗಳು (ಎನ್ ಬಿ ಟಿ) | ಅವಲೋಕನ. ಅವುಗಳ ಮೇಲೆ ಚರ್ಚೆ, ಅವು ಎಲ್ಲಿ ವಾಸಿಸುತ್ತವೆ, ಏನನ್ನು ತಿನ್ನುತ್ತವೆ, ಕೀಟ ಕಡಿತ (ಕಣಜ) ಇತ್ಯಾದಿ. ಅವುಗಳಲ್ಲಿ ಕೆಲವುಗಳ ಚಿತ್ರ ಬಿಡಿಸುವುದು. |
| ***ಪಕ್ಷಿಗಳು***<br>ನಿಮ್ಮ ಪ್ರದೇಶದ ಸುತ್ತಮುತ್ತಲಲ್ಲಿ ಯಾವ ಪಕ್ಷಿಗಳನ್ನುನೀವು ನೋಡುತ್ತೀರಾ? ಅವು ಕೆಲವು ಮರಗಳಿಗಿಂತ ಹೆಚ್ಚಾಗಿ ಇತರ ಮರಗಳನ್ನು ಇಷ್ಟಪಡುತ್ತವೆಯೆ?ಅವು ಏನನ್ನು ತಿನ್ನುತ್ತವೆ? ಅವುಗಳ ರೆಕ್ಕೆ ಪುಕ್ಕಗಳನ್ನು ನೋಡಿ ನೀವು ಅವುಗಳನ್ನು ಗುರುತಿಸಬಲ್ಲಿರಾ? ಅವು ಮಾಡುವ ವಿವಿಧ ಶಬ್ದಗಳಾವುವು? ಅವು ಪರಸ್ಪರ ಏನಾದರೂ ಹೇಳಿಕೊಳ್ಳುತ್ತವೆಯೆ? ಬೇರೆ ಕಡೆಯಿಂದ ಬರುವ ಕೆಲವು ಪಕ್ಷಿಗಳು ಇವೆಯೆ? ನೀವು ಪಕ್ಷಿಗಳಿಗೆ ಆಹಾರವನ್ನು ನೀಡುತ್ತೀರಾ ಅಥವಾ ಅವುಗಳಿಗೆ ನೀರನ್ನು | ಪಕ್ಷಿಗಳ ಬಗ್ಗೆ ಮಕ್ಕಳಿಗಿರುವ ಕಲ್ಪನೆಗಳನ್ನು – ಅವುಗಳ ವಾಸಸ್ಥಳಗಳು, ಆಹಾರಕ್ರಮಗಳು, ಅವು ಸೃಷ್ಟಿಸುವ ಶಬ್ದಗಳು, ರೆಕ್ಕೆ ಪುಕ್ಕಗಳಂತಹ ಸಾಮಾನ್ಯ ಲಕ್ಷಣಗಳನ್ನು ಪರಿಶೋಧಿವುದು. ಪಕ್ಷಿಗಳಿಗೆ ಆಹಾರ ನೀಡುವುದು. | ಮಗುವಿನ ದಿನನಿತ್ಯ ಬದುಕಿನ ಅನುಭವ, ಅವಲೋಕನ, ಪಕ್ಷಿಗಳ ಮೇಲಿನ ಕತೆಗಳು/ ಕವನಗಳು (ಎನ್ ಬಿ ಟಿ)<br> | ಪಕ್ಷಿಗಳ ಚಿತ್ರ ಬಿಡಿಸುವುದು; ಪಕ್ಷಿಗಳ ಕತ್ತಿನ ಚಲನೆಯನ್ನು ಮತ್ತು ಶಬ್ದಗಳನ್ನು ಅನುಕರಿಸುವುದು, ಪುಕ್ಕಗಳನ್ನು ಸಂಗ್ರಹಿಸುವುದು. |

| | | | |
|---|---|---|---|
| ಇಡುತ್ತೀರಾ? | | | ನಿಮ್ಮ ತಂದೆ, ತಾಯಿ ಮತ್ತು ನಿಮಗಾಗಿ ದಿನದ ವೇಳಾಪಟ್ಟಿಯನ್ನು ತಯಾರಿಸಿ, ಚರ್ಚೆ. |
| **1.4ಕೆಲಸ ಮತ್ತು ಆಟ**<br>***ನನ್ನ ಸುತ್ತಮುತ್ತಲಲ್ಲಿ ಕೆಲಸ***<br>ನನ್ನ ಸುತ್ತಮುತ್ತ ನಡೆಯುವ ವಿವಿಧ ಕೆಲಸಗಳಾವುವು? ನನ್ನ ತಾಯಿ/ತಂದೆ/ಸಹೋದರ /ಸಹೋದರಿ ಮೊದಲಾದವರು ಯಾವ ತರಹದ ಕೆಲಸವನ್ನು ಮಾಡುತ್ತಾರೆ? ನಾನೇನು ಕೆಲಸ ಮಾಡುತ್ತೇನೆ? ಇತರರು ಯಾವ ಕೆಲಸವನ್ನು ಮಾಡುತ್ತಾರೆ? ನಾನು ಕೆಲಸ ಮಾಡದೆ ಇರುವಾಗ ನಾನೇನು ಮಾಡುತ್ತೇನೆ?ನನ್ನ ತಂದೆ/ತಾಯಿ ಕೆಲಸ ಮಾಡದೆ ಇರುವಾಗ ಏನು ಮಾಡುತ್ತಾರೆ? | ವಿವಿಧ ಉದ್ಯೋಗಗಳು, ಕೆಲಸದ ವೇಳೆ ಮತ್ತು ವಿಶ್ರಾಂತಿಯ ವೇಳೆಯ ಕಲ್ಪನೆ; ಮನೆಯೊಳಗಿನ ಮತ್ತು ಹೊರಗಿನ ಕೆಲಸ – ಲಿಂಗ, ವಯಸ್ಸು, ಜಾತಿ, ಆರ್ಥಿಕ ಇತ್ಯಾದಿ ಅಂಶಗಳು. | ಕವನ: ಶ್ಯಾಮ್ ಬಹದ್ದೂರ್ ನಮ್ರಾ ಅವರ 'ಹೋಮ್ ವರ್ಕ್'. *ಉದಾಹರಣಾ ವಿಶ್ಲೇಷಣೆ (CaseStudy):* ಮನೆಯಲ್ಲಿ ತುಂಬಾ ಕೆಲಸ ಮಾಡುವ ಮಗುವಿನ ದಿನಿಚರಿಯ ವೇಳಾಪಟ್ಟಿ. | |
| ***ದುಡಿಯುವ ಮಕ್ಕಳು***<br>ನಿಮ್ಮ ಅಜ್ಜ ಅಜ್ಜಿಯರು ಚಿಕ್ಕವರಿದ್ದ ಕಾಲದಲ್ಲಿ ಮಕ್ಕಳು ಯಾವ ತರಹದ ಕೆಲಸಗಳನ್ನು ಮಾಡುತ್ತಿದ್ದರು? ಅದು ಈಗ ಬದಲಾಗಿದೆಯೆ? ಕೆಲಸ ಮಾಡಿಕೊಂಡು ಶಾಲೆಗೆ ಹೋಗುವ/ ಕೆಲಸ ಮಾಡಿಕೊಂಡು ಶಾಲೆಗೆ ಹೋಗಲಾಗದಿರುವಂತಹ ಮಕ್ಕಳು ನಿಮಗೆ ಗೊತ್ತಿದ್ದಾರೆಯೆ? | ಕುಟುಂಬದ ಅವಗಣನೆಯ ಕಾರಣದಿಂದಲ್ಲ ಆದರೆ ವ್ಯವಸ್ಥೆಯ ಕಾರಣದಿಂದ ಮನೆಯಲ್ಲಿ ಮತ್ತು ಹೊರಗೆ ಕೆಲಸ ಮಾಡುತ್ತಿರುವ ಇತರ ಮಕ್ಕಳ ಬಗ್ಗೆ ಮಕ್ಕಳನ್ನು | ಚಾರ್ಲ್ಸ್ ಡಿಕೆನ್ಸ್ ನ ಕತೆಯ ಆಯ್ದಭಾಗ. ಮತ್ತೊಂದು ದೇಶದ ಸಾಮಾನ್ಯ ಶಾಲೆಯಲ್ಲಿನ ಒಂದು ಬಡ ಮಗುವಿನ /ಬಾಲ ಕಾರ್ಮಿಕಳ/ನ | ಕತೆಗಳು/ಆಯ್ದ ಭಾಗಗಳನ್ನು ಓದುವುದು ಮತ್ತು ಕೇಳುವುದು. ಶಿವಕಾಶಿಯಲ್ಲಿ ಪಟಾಕಿಗಳನ್ನು ತಯಾರಿಸುವ, ಮತ್ತು ಡಾಬಾಗಳಲ್ಲಿ ಮತ್ತು ಆಟೊ ಗರಾಜಿನಲ್ಲಿ ಕೆಲಸ ಮಾಡುತ್ತಿರುವ ಮಕ್ಕಳ ಕುರಿತು ಚರ್ಚೆ ಮತ್ತು ಕಥನಗಳು. |

| | | | |
|---|---|---|---|
| ***ನಾವು ಆಡುವ ಆಟಗಳು***<br>ನಾನು ಯಾವ ಆಟವನ್ನು ಆಡುತ್ತೇನೆ? ನನ್ನ ಅಜ್ಜ ಅಜ್ಜಿಯರು ಇದೇ ಆಟವನ್ನಾಡುತ್ತಿದ್ದರೆ? ಇವು ಒಳಾಂಗಣ ಆಟಗಳೆ ಅಥವಾ ಹೊರಾಂಗಣ ಆಟಗಳೆ?<br><br>**2. ಆಹಾರ**<br>***ಸಸ್ಯಗಳಿಂದ ಮತ್ತು ಪ್ರಾಣಿಗಳಿಂದ ಆಹಾರ***<br>ಇವುಗಳಲ್ಲಿ ಯಾವುದು ಆಹಾರ – ಕೆಂಪಿರುವೆಗಳು, ಪಕ್ಷಿಗಳ ಗೂಡುಗಳು, ಹಾವುಗಳು, ಬಾಳೆಹಣ್ಣು, ಆಡಿನ ಹಾಲು, ಇತ್ಯಾದಿ.? ನೀವು ಯಾವ ಸಸ್ಯಗಳನ್ನು, ಸಸ್ಯದ ಯಾವ ಭಾಗಗಳನ್ನು ತಿನ್ನುತ್ತೀರಿ? ಪ್ರಾಣಿಗಳಿಂದ ನಾವು ಯಾವ ಆಹಾರವನ್ನು ಪಡೆದುಕೊಳ್ಳುತ್ತೀವಿ? | ಸೂಕ್ಷ್ಮಶೀಲರನ್ನಾಗಿಸಿ. ಎಲ್ಲ ಮಕ್ಕಳು ಶಾಲೆಗೆ ಹೋಗುವುದು ಮುಖ್ಯ. ಎಲ್ಲ ಮಕ್ಕಳು ಸಮಾನವಾದ ಒಳ್ಳೆಯ ಶಾಲೆಗಳಿಗೆ ಹೋಗಲು ಪ್ರಾರಂಭಿಸುವ ಮೊದಲು ಇತರ ದೇಶಗಳಲ್ಲಿ ಬಾಲಕಾರ್ಮಿಕ ಪದ್ಧತಿ ಹೇಗಿತ್ತು ಎಂಬುದನ್ನು ಕುರಿತು ಅರಿವು.<br><br>ವಿರಾಮಕಾಲ; ಶಾಲೆಯಲ್ಲಿ ಮತ್ತು ಹೊರಗೆ ಆಟಗಳು, ಆಟಗಳು - ಹಿಂದೆ ಮತ್ತು ಇಂದು; ಕೆಲವರಿಗೆ ಕೆಲಸವೇ ಆಟ.<br><br>ಆಹಾರದಲ್ಲಿರುವ ಸಾಂಸ್ಕೃತಿಕ ವೈವಿಧ್ಯತೆಯನ್ನು ಗುರುತಿಸುವುದು; ವಿವಿಧ ಸಸ್ಯಗಳನ್ನು ಆಹಾರವಾಗಿ ಉಪಯೋಗಿಸುವ ಕುರಿತು ಮೂಲ ಕಲ್ಪನೆಗಳು; | ಅನುಭವವನ್ನು ವಿವರಿಸುವ ಕಥನ.<br><br>ಸಾಂಪ್ರದಾಯಿಕ ಮತ್ತು ಸ್ಥಳೀಯ ಆಟಗಳು; ಜನಪದ ಆಟಿಕೆಗಳು.<br><br>ಉಲ್ಲೇಖವಾಗಿರುವ 'ಸಾಮಾನ್ಯವಾಗಿರದ ' ಆಹಾರಗಳನ್ನು ಕುರಿತ ಪ್ರಾದೇಶಿಕ ಕಥನಗಳು ಮತ್ತು ಕತೆಗಳು. | ಒಳಾಂಗಣ ಮತ್ತು ಹೊರಾಂಗಣ ಆಟಗಳನ್ನು ಪಟ್ಟಿ ಮಾಡುವುದು ಮತ್ತು ವರ್ಗೀಕರಿಸುವುದು.<br><br>ನಾವು ತಿನ್ನುವ ಅಥವಾ ತಿನ್ನದಿರುವ ಆಹಾರಗಳನ್ನು ಪಟ್ಟಿಮಾಡುವುದು ಮತ್ತು ಚರ್ಚಿಸುವುದು; ವಿಭಿನ್ನ ಪ್ರಾಣಿ ಮತ್ತು ಸಸ್ಯಗಳಿಂದ ನಾವು ಪಡೆದುಕೊಳ್ಳುವ ಆಹಾರದ ಕೋಷ್ಟಕವನ್ನು ತಯಾರಿಸುವುದು. ನಾವು ತಿನ್ನುವ ಸಸ್ಯಗಳ ಭಾಗಗಳನ್ನು ಗಮನಿಸುವುದು ಮತ್ತು ಚಿತ್ರವನ್ನು ಬಿಡಿಸುವುದು.<br><br>ಕಚ್ಚಾ ಮತ್ತು ಬೇಯಿಸಿದ ಆಹಾರವನ್ನು ಪಟ್ಟಿಮಾಡುವುದು; |

| | | | |
|---|---|---|---|
| ***ಅಡುಗೆ ಮಾಡುವುದು***<br>ಬೇಯಿಸದೆ ಇರುವ ಯಾವುದನ್ನು ನೀವು ತಿನ್ನುತ್ತೀರಾ? ಬೇಯಿಸಿದಾಗ ಮಾತ್ರ ತಿನ್ನುವಂಥಾದ್ದು ಯಾವುದು? ನೀವು ಆಹಾರವನ್ನು ಹೇಗೆ ಬೇಯಿಸುತ್ತೀರಿ? ಯಾವುದರ ಮೇಲೆ ಬೇಯಿಸುತ್ತೀರಿ? ಅಡುಗೆ ಮಾಡಲು ಉಪಯೋಗಿಸುವ ವಿವಿಧ ಪಾತ್ರೆಗಳಾವುವು? ಅವುಗಳನ್ನು ಯಾವುದರಿಂದ ಮಾಡಲ್ಪಟ್ಟಿವೆ? ಎಲ್ಲ ತರಹದ ಅಡುಗೆಗಳಲ್ಲೂ ನೀರನ್ನು ಉಪಯೋಗಿಸಲಾಗುತ್ತದೆಯೆ? ಯಾವ ಆಹಾರವನ್ನು ನೀರು ಉಪಯೋಗಿಸದೆ ಬೇಯಿಸಲಾಗುತ್ತದೆ? ಹೇಗೆ?<br><br>***ತಿನ್ನುವುದು ಮತ್ತು ಕುಟುಂಬ***<br>ನಿಮ್ಮ ಕುಟುಂಬದಲ್ಲಿ ಎಲ್ಲರೂ ಒಂದೇ ರೀತಿಯ ಆಹಾರವನ್ನು ತಿನ್ನುತ್ತಾರೆಯೆ? ಯಾರು ಜಾಸ್ತಿ ತಿನ್ನುತ್ತಾರೆ? ಯಾರು ನಿಮ್ಮ ಕುಟುಂಬದಲ್ಲಿ | ಪ್ರಾಣಿಗಳಿಂದ ಆಹಾರ.<br><br>ಆಹಾರವನ್ನು ಹಾಗೆಯೇ ತಿನ್ನಬಹುದು ಇಲ್ಲವೇ ಬೇಯಿಸಿ - ಹಬೆಯಲ್ಲಿ ತಯಾರಿಸಿ, ಕುದಿಸಿ, ಕಾವಿನಿಂದ ಸುಟ್ಟು, ಹುರಿದು ಇತ್ಯಾದಿಯಾಗಿ ಸಿದ್ದಪಡಿಸಿ ತಿನ್ನಬಹುದು; ವಿವಿಧ ಇಂಧನಗಳು, ಒಲೆಗಳ ವಿಧಗಳು; ಅಡುಗೆಯಲ್ಲಿ ಉಪಯೋಗಿಸುವ ಪಾತ್ರೆಗಳ ವಿಧಗಳು, ವಿವಿಧ ಆಕಾರಗಳು (ಪ್ರಾದೇಶಿಕ/ ಸಾಂಪ್ರದಾಯಿಕ), ಬಳಸುವ ವಿಭಿನ್ನ ಕಚ್ಚಾ ವಸ್ತುಗಳು ಇತ್ಯಾದಿ. | ಆಹಾರ ಅಥವಾ ಅದರ ಕೊರತೆಯ ಕುರಿತ ಹಾಡುಗಳು/ ಕವನಗಳು; ಯಾವುದುತಿನ್ನಲು ಅರ್ಹವಾದುದು ಎನ್ನುವುದರ ಬಗ್ಗೆ ಸ್ಥಳೀಯ ಜ್ಞಾನ; ಛಾಯಾಚಿತ್ರಗಳು. | ಅಡುಗೆ ಮಾಡುವ ವಿಧಾನಗಳು/ ಕಚ್ಚಾ ವಸ್ತುಗಳು, ಇತ್ಯಾದಿ ಬಗ್ಗೆ ಚರ್ಚೆ; ಉಪಯೋಗಿಸಲಾಗುವ ಪಾತ್ರೆಗಳ ಮತ್ತು ಉರುವಲುಗಳ ವಿಧಗಳ ಸಮೀಕ್ಷೆ; ಹಲವಾರು ಪಾತ್ರೆಗಳ ಚಿತ್ರವನ್ನು ಬಿಡಿಸುವುದು; ಅಡುಗೆ ಮನೆಯಲ್ಲಿ ಆಗಿರುವ ಬದಲಾವಣೆ ಮತ್ತು ಹೆಚ್ಚು ಕಡಮೆ ಯಾವಾಗ ಎನ್ನುವುದರ ಐತಿಹಾಸಿಕ ಕಾಲಾನುಕ್ರಮ.<br><br>ಅವಲೋಕನ ಮತ್ತು ಹಿರಿಯರನ್ನು ಕೇಳುವುದು, ಚರ್ಚೆ ಮಾಡುವುದು. ಮಾರುಕಟ್ಟೆಯಿಂದ ತರುವ ಮತ್ತು ಮನೆಯಲ್ಲಿ ಬೆಳೆಯುವ ಆಹಾರ ಪದಾರ್ಥಗಳ ಪಟ್ಟಿಮಾಡುವುದು. |

| | | | |
|---|---|---|---|
| ಕೊನೆಯಲ್ಲಿ ತಿನ್ನುತ್ತಾರೆ? ಯಾರು ಮನೆಗೆ ಆಹಾರವನ್ನು ಕೊಂಡುಕೊಳ್ಳುತ್ತಾರೆ ಮತ್ತು ಏನನ್ನು ಮಾರುಕಟ್ಟೆಯಿಂದ ಕೊಂಡು ಕೊಳ್ಳಲಾಗುತ್ತದೆ? ನಿಮ್ಮ ಕುಟುಂಬದಲ್ಲಿ ಅಡುಗೆ ಮಾಡುವವರು ಯಾರು? ಶಿಶುಗಳು ಯಾವುದನ್ನು ಆಹಾರವಾಗಿ ತೆಗದುಕೊಳ್ಳುತ್ತವೆ? ಶಿಶುಗಳು ಯಾವಾಗ ತಿನ್ನಲು ಶುರುಮಾಡುತ್ತವೆ ಮತ್ತು ಹಾಲನ್ನು ಹೊರತುಪಡಿಸಿ ಅವು ಏನನ್ನು ತಿನ್ನುತ್ತವೆ?<br><br>***ಪ್ರಾಣಿಗಳು ಏನನ್ನು ತಿನ್ನುತ್ತವೆ***<br>ಪ್ರಾಣಿಗಳು ಒಂದೇ ರೀತಿಯ ಪದಾರ್ಥಗಳನ್ನು ತಿನ್ನುತ್ತವೆಯೆ? ವಿವಿಧ ಪ್ರಾಣಿಗಳು ಏನನ್ನು ತಿನ್ನುತ್ತವೆ? ನಿಮ್ಮ ಸುತ್ತಮುತ್ತಲು ಇರುವ ಪ್ರಾಣಿಗಳಿಗೆ ಆಹಾರ ನೀಡುತ್ತೀರಾ – ಏನು ನೀಡುತ್ತೀರಾ? ನೀವು ಆಹಾರ ನೀಡದಿದ್ದರೂ ಅವು ನಿಮ್ಮ ಮನೆಯಿಂದ ಏನನ್ನು ತೆಗೆದುಕೊಂಡು ಹೋಗುತ್ತವೆ? | ಕುಟುಂಬದಲ್ಲಿ ತಿನ್ನುವ ವೈವಿಧ್ಯ ಅಭ್ಯಾಸಗಳು. ಲಿಂಗ, ವಯಸ್ಸು , ದೈಹಿಕ ಚಟುವಟಿಕೆ ಇತ್ಯಾದಿಯನ್ನು ಆಧರಿಸಿ ತೆಗೆದುಕೊಳ್ಳುವ ಆಹಾರ ಪ್ರಮಾಣದಲ್ಲಿನ ವ್ಯತ್ಯಾಸ. ಅಡುಗೆ ಮಾಡುವುದು ಮತ್ತು ಕುಟುಂಬದಲ್ಲಿ ಲಿಂಗ ಸಂಬಂಧಿಯ/ ಜಾತಿಯ ಪಾತ್ರಗಳು. ಶಿಶುವಿಗೆ ಆಹಾರ, ಹಾಲಿನ ಮಹತ್ವ.<br><br>ಸಾಕು ಪ್ರಾಣಿಗಳು ಮತ್ತು ಕಾಡು ಪ್ರಾಣಿಗಳ ಆಹಾರಗಳು; ಸಾಕು ಪ್ರಾಣಿಗಳ ಆರೈಕೆ. | ಪ್ರತಿನಿತ್ಯದ ಅನುಭವ, ಸ್ಥಳೀಯ ಜ್ಞಾನ; ಲಿಂಗಾಧಾರಿತ ಸಿದ್ಧಮಾದರಿಗಳ ಕವನಗಳು/ಸಚಿತ್ರ ವಿವರಣೆಗಳು.<br><br>ಕತೆಗಳು, ವ್ಯಂಗ್ಯಚಿತ್ರಗಳು ಮತ್ತು ಸಿನಿಮಾಗಳು. | ಪ್ರಾಣಿಗಳನ್ನು ಮತ್ತು ಅವುಗಳ ಆಹಾರ ಪದ್ಧತಿಯನ್ನು ಗಮನಿಸುವುದು ಮತ್ತು ಪಟ್ಟಿ ಮಾಡುವುದು; ಪ್ರಾಣಿಗಳಿಗೆ ಕೊಡುವ ಆಹಾರದ ಬಗ್ಗೆ ಚರ್ಚಿಸುವುದು; ಪ್ರಾಣಿಗಳಿಗೆ ಆಹಾರ ನೀಡುವುದನ್ನು ಗಮನಿಸುವುದು, ಆಹಾರವನ್ನು ಹೊರಗಡೆ ಇಟ್ಟು ಅದನ್ನು ಪ್ರಾಣಿಗಳು ಬಂದು ತಿನ್ನುವುದನ್ನು ಗಮನಿಸುವುದು.<br><br>ಚರ್ಚೆ; ಅವಲೋಕನ; ಚಿತ್ರ |

| | | | |
|---|---|---|---|
| **3. ವಸತಿ**<br>***ಮನೆಗಳು ಮತ್ತು ಮನೆಗಳು***<br>ಮೆಟ್ಟುಗಣೆಯ ಮೇಲೆ ಕಟ್ಟಿರುವ ಮನೆ, ಡೇರೆ, ಹತ್ತನೆ ಮಹಡಿಯಲ್ಲಿರುವ ಮನೆ, ಗಾಲಿಯಿರುವ ಮನೆಗಳು ಅಥವಾ ದೋಣಿಯಲ್ಲಿರುವ ಮನೆಗಳನ್ನು ನೀವು ನೋಡಿದ್ದೀರಾ? ಅಂತಹ ಮನೆಗಳಲ್ಲಿ ಇರುವ ಯಾರಾದರೂ ನಿಮಗೆ ಗೊತ್ತಿದ್ದಾರೆಯೆ? ಅಂತಹ ಮನೆಗಳನ್ನು ಜನರು ಏಕೆ ಉಪಯೋಗಿಸುತ್ತಾರೆ.<br><br>***ನಮ್ಮ ವಸತಿಯನ್ನು ಅಲಂಕರಿಸುವುದು ಮತ್ತು ಸ್ವಚ್ಛಗೊಳಿಸುವುದು***<br>ನಿಮ್ಮ ವಸತಿಯನ್ನು ನೀವು ಹೇಗೆ ಅಲಂಕರಿಸುತ್ತೀರಿ? ನೀವು ನಿಮ್ಮ ಗೊಡೆಗಳ/ನೆಲದ ಮೇಲೆ ವಿನ್ಯಾಸಗಳನ್ನು ಚಿತ್ರಿಸುತ್ತೀರಾ ಅಥವಾ ಎಲೆಗಳು/ಹೂವುಗಳು/ ಇತರ ವಸ್ತುಗಳಿಂದ ಅಲಂಕರಿಸುತ್ತೀರಾ? ನಿಮ್ಮ ಮನೆಯನ್ನು ನೀವು ಹೇಗೆ ಸ್ವಚ್ಛವಾಗಿಡುತ್ತೀರಿ? ಸ್ವಚ್ಛಗೊಳಿಸಲು ನೀವೂ ಸಹಾಯ ಮಾಡುತ್ತೀರಾ? ಗುಡಿಸಿ ಒರೆಸುವ ಕೆಲಸವನ್ನು ಯಾರು ಮಾಡುತ್ತಾರೆ? ನಿಮ್ಮ ಕಸವನ್ನು ಎಲ್ಲಿ | ಕೆಲವು ಅಸಾಮಾನ್ಯ ಮನೆಗಳು, ಅಂತಹ ಮನೆಗಳನ್ನು ಏಕೆ ಕಟ್ಟಲಾಗುತ್ತದೆ ಎನ್ನುವ ಕುರಿತು ಒಂದು ಕಥನ ಮತ್ತು ಚರ್ಚೆ. ವಿವಿಧ ಬಗೆಯ ಮನೆಗಳು. ಆಶ್ರಯದ ಅಗತ್ಯ, ಒಟ್ಟಾಗಿ ಬದುಕುವುದರ ಅಗತ್ಯ.<br><br>ನಮ್ಮ ಮನೆ, ವಿವಿಧ ಸಂಸ್ಕೃತಿಗಳಲ್ಲಿ ಮನೆಗಳನ್ನು/ ಆಶ್ರಯಗಳನ್ನು ವಿವಿಧ ರೀತಿಗಳಲ್ಲಿ ಅಲಂಕರಿಸ ಲಾಗುತ್ತದೆ. ಸಕೆ, | ವಿವಿಧ ಬಗೆಯ ಮನೆಗಳ ಚಿತ್ರಗಳು; ಮನೆಯ ಮಾದರಿಯನ್ನು ತಯಾರಿಸಲು ಸುಲಭವಾಗಿ ಲಭ್ಯವಿರುವ ವಸ್ತುಗಳು.<br><br>ಮನೆಯನ್ನು ಅಲಂಕರಿಸುವುದ ಕ್ಕಾಗಿ | ಬಿಡಿಸುವುದು, ಮಾದರಿ ತಯಾರಿಸುವುದು ಮತ್ತು ಕಲಾಕೃತಿಗಳು. ಕಲ್ಪಿತ ಅನುಭವಗಳ ಸೃಜನಶೀಲ ಬರವಣಿಗೆ.<br><br>ನಿಮ್ಮ ಮನೆಯ ಚಿತ್ರವನ್ನು ಬಿಡಿಸಿ. ಮನೆಗಳ ಗೋಡೆಗಳು/ ನೆಲಗಳನ್ನು ಅಲಂಕರಿ ಸುವುದಕ್ಕೆ ಬಳಸಲಾಗುವ ವಿವಿಧ ವಿನ್ಯಾಸ ಗಳು, ವಿಶಿಷ್ಟ ಗುರುತುಗಳನ್ನು ಬಿಡಿಸಿ.<br><br> |

| | | | |
|---|---|---|---|
| ಎಸೆಯುತ್ತೀರಿ? ಮಳೆಗಾಲ, ಬೇಸಿಗೆ ಕಾಲ ಅಥವಾ ಚಳಿಗಾಲದಲ್ಲಿ ನಿಮ್ಮ ಮನೆಯಲ್ಲಿರಲು ನಿಮಗೇನಾದರೂ ಸಮಸ್ಯೆಯಾಗುತ್ತದೆಯೆ? ಇಳಿಜಾರಿರುವ ಛಾವಣಿಯ ಮನೆಗಳನ್ನು ನೀವು ನೋಡಿದ್ದೀರಾ? ಅವನ್ನು ಏಕೆ ಇಳಿಜಾರಾಗಿ ಮಾಡಲಾಗಿದೆ?<br><br>***ನನ್ನ ಕುಟುಂಬ ಮತ್ತು ಜೊತೆಯಲ್ಲಿರುವ ಇತರ ಪ್ರಾಣಿಗಳು***<br>ನಿಮ್ಮೊಂದಿಗೆ ಯಾರೆಲ್ಲ ವಾಸಿಸುತ್ತಿದ್ದಾರೆ? ನಿಮ್ಮೊಂದಿಗೆ ಯಾವ ಪ್ರಾಣಿಗಳು ವಾಸಿಸುತ್ತಿವೆ – ನಿಮ್ಮ ಮನೆಯಲ್ಲಿ ವಾಸಿಸುತ್ತಿರುವ ಅತಿ ದೊಡ್ಡ ಮತ್ತು ಅತಿ ಸಣ್ಣ ಪ್ರಾಣಿ ಯಾವುದು? ಅವು ಆಹಾರವನ್ನು ಎಲ್ಲಿಂದ ಪಡೆದುಕೊಳ್ಳುತ್ತವೆ? ನಿಮ್ಮ ಮನೆಯಲ್ಲಿ ಈ ಪ್ರಾಣಿಗಳು ಎಲ್ಲಿ ವಾಸಿಸುತ್ತವೆ? ಅವುಗಳಲ್ಲಿ ಯಾವವು ರಾತ್ರಿ ಮಾತ್ರ ಕಾಣಿಸಿಕೊಳ್ಳುತ್ತವೆ?<br><br>***ನನ್ನ ನೆರೆಹೊರೆಯ ನಕಾಶೆ ತಯಾರಿಸುವುದು***<br>ನಿಮ್ಮ ಶಾಲೆ ಎಷ್ಟು ದೊಡ್ಡದಿದೆ? ಅದು ಯಾವ ತರಹದ ಕಟ್ಟಡ? ನಿಮ್ಮ ಶಾಲೆ ಮತ್ತು ನಿಮ್ಮ ತರಗತಿಯ ಚಿತ್ರವನ್ನು ನೀವು | ಚಳಿ ಮತ್ತು ಮಳೆಯಿಂದ ಹಾಗೂ ಎದುರಾಗುವ ಸಮಸ್ಯೆಗಳಿಂದ ರಕ್ಷಣೆ ಒದಗಿಸಲು ಮನೆಯ ಅಗತ್ಯ ಮನೆಗೆಲಸವನ್ನು ಹಂಚಿ ಕೊಳ್ಳುವ ಅಗತ್ಯ. ಕಸ ವಿಸರ್ಜನೆ.<br><br>ಕುಟುಂಬದ ಸದಸ್ಯರು; ಮುದ್ದಿನ ಪ್ರಾಣಿಗಳು ಮತ್ತು ಇತರ ಪ್ರಾಣಿಗಳು, ಕೀಟಗಳು, ದಂಶಕಗಳು ಇತ್ಯಾದಿ. ಮುದ್ದಿನ ಪ್ರಾಣಿಗಳಿಗೆ ಮತ್ತು ಇತರ ಪ್ರಾಣಿಗಳಿಗೆ ಆಹಾರ. ಕೆಲವು ರಾತ್ರಿ ಮಾತ್ರ ಕಾಣಿಸಿ ಕೊಳ್ಳುತ್ತವೆ. | ಬಳಸಲಾಗುವ ವಿನ್ಯಾಸಗಳು, ವಿಶಿಷ್ಟ ಗುರುತುಗಳ ಸಚಿತ್ರ ವಿವರಣೆಗಳು.<br><br>ದಿನನಿತ್ಯದ ಬದುಕಿನ ಅನುಭವಗಳು. ವ್ಯಂಗ್ಯ ಚಿತ್ರಗಳು. | ಅನುಭವಗಳನ್ನು ಮತ್ತು ಜ್ಞಾನವನ್ನು ಚರ್ಚಿಸುವುದು ಮತ್ತು ಹಂಚಿ ಕೊಳ್ಳುವುದು. ಕೀಟಗಳು, ದಂಶಕಗಳು; ಮುದ್ದಿನ ಪ್ರಾಣಿಗಳ ಮತ್ತು ಇತರ ಸಾಕುಪ್ರಾಣಿಗಳ ಚಿತ್ರಗಳನ್ನು ಬಿಡಿಸುವುದು.<br><br>ದೂರವನ್ನು ಅಂದಾಜು ಮಾಡುವುದು, ಸ್ಥಳಗಳ ಇರುವಿಕೆಯನ್ನು ಗುರುತು ಮಾಡುವುದು ಮತ್ತು ಮೇಲಿನಿಂದ, ಮುಂದಿನಿಂದ ಇತ್ಯಾದಿ ವಿವಿಧ ದೃಷ್ಟಿ ಕೋನಗಳಿಂದ ಚಿತ್ರ ಬಿಡಿಸುವುದು/ ನಕಾಶೆಯನ್ನು ತಯಾರಿಸುವುದು. ನಮ್ಮ ಮನೆಯಿಂದ ಹತ್ತಿರವಿರುವ ಅಂಗಡಿಗೆ ಹೋಗುವ ದಾರಿಯ ನಕಾಶೆಯನ್ನು ಬಿಡಿಸುವುದು.<br><br>ನೀರಿನ |

| | | | |
|---|---|---|---|
| ಬಿಡಿಸಬಹುದೆ?ನಿಮಗೆ ನಿಮ್ಮ ನೆರೆಹೊರೆಯ ಪರಿಚಯವಿದೆಯೆ? ನಮ್ಮ ಮನೆಯಿಂದ ಅಂಚೆ ಕಚೇರಿಗೆ ಅಥವಾ ಬಸ್ ನಿಲ್ದಾಣಕ್ಕೆ ಹೇಗೆ ಹೋಗುವುದು ಎಂದು ನಾವು ಯಾರಿಗಾದರೂ ವಿವರಿಸಬಹುದೆ? | ದ್ವಿ-ಆಯಾಮದಲ್ಲಿ ನೆರೆಹೊರೆಯ ನಕಾಶೆಯನ್ನು ತಯಾರಿಸುವುದು ಮತ್ತು ಚಿತ್ರಿಸುವುದು. ದಿಶಾಪ್ರಜ್ಞೆ | ಶಾಲೆಯ ವಿವಿಧ ಬಾಗಗಳ ಸಮೀಕ್ಷೆ, ನೆರೆಹೊರೆಯ ಸಮೀಕ್ಷೆ. | ಮೂಲಗಳನ್ನು ಪಟ್ಟಿ ಮಾಡುವುದು. ಹಿರಿಯರು ಮತ್ತು ಇತರ ಜನರನ್ನು ಪ್ರಶ್ನೆಗಳನ್ನು ಕೇಳುವ ಮೂಲಕ ಪರಿ ಶೋಧಿಸುವುದು. ಚರ್ಚೆ ಮಾಡುವುದು. |
| **4. ನೀರು**<br>***ನನ್ನ ಕುಟುಂಬಕ್ಕೆ ನೀರು***<br>ನೀವಿರುವ ಸ್ಥಳದಲ್ಲಿ ಪ್ರಮುಖವಾಗಿರುವ ನೀರಿನ ಮೂಲಗಳಾವುವು? ಯಾರು ನೀರನ್ನು ತರುತ್ತಾರೆ ಮತ್ತು ಎಷ್ಟು ದೂರದಿಂದ? ನಿಮ್ಮ ಪ್ರದೇಶದಲ್ಲಿರುವ ಎಲ್ಲರೂ ಒಂದೇ ಮೂಲದಿಂದ ನೀರನ್ನು ಪಡೆಯುತ್ತಾರೆಯೆ? ನೀವು ನೀರು ತೆಗೆದುಕೊಳ್ಳುತ್ತಿರುವು ಸ್ಥಳದಿಂದ ನೀರನ್ನು ತೆಗೆದುಕೊಂಡು ಹೋಗಲು ಕೆಲವರಿಗೆ ಬಿಡುವುದಿಲ್ಲವೆ? ನೀವು ಎಲ್ಲಿಂದ ನೀರನ್ನು ಪಡೆಯುತ್ತೀರಿ? ಅದು ಕುಡಿಯಲು ಸಾಕಷ್ಟು ಸ್ವಚ್ಛವಾಗಿದೆಯೆ?<br><br>***ಪ್ರಾಣಿಗಳು ಮತ್ತು ಸಸ್ಯಗಳಿಗೆ ನೀರಿನ ಅಗತ್ಯವಿದೆಯೆ?*** | ನೀರಿನ ಸ್ಥಳೀಯ ಮೂಲಗಳು; ನೀರಿನ ಉಪಯುಕ್ತತೆ; ಲಿಂಗಾಧಾರಿತ ಪಾತ್ರಗಳು; ದೂರದ ಅಂದಾಜುಗಳು; ಸಾಮಾಜಿಕ ಭೇದಭಾವ; ಕುಡಿಯಲು ಸ್ವಚ್ಛವಾದ ನೀರು. | ಮಗುವಿನ ದಿನನಿತ್ಯ ಬದುಕಿನ ಅನುಭವ, ಸ್ಥಳೀಯ ಜ್ಞಾನ. | ಓದುವುದು, ಚರ್ಚೆ ಮಾಡುವುದು; ಚೆನ್ನಾಗಿ ನೀರುಣಿಸಿದ ಮತ್ತು ಸೊರಗುತ್ತಿರುವ ಸಸ್ಯದ ಹೋಲಿಕೆ.<br><br>ನೀರಿನ ಉಳಿತಾಯದ ಸಂದೇಶವಿರುವ ಭಿತ್ತಿಚಿತ್ರ ತಯಾರಿಸುವ/ |

| | | | |
|---|---|---|---|
| ಸಸ್ಯಗಳಿಗೆ ಮತ್ತು ಪ್ರಾಣಿಗಳಿಗೆ ನೀರು ಸಿಗದಿದ್ದಲ್ಲಿ ಏನಾಗುತ್ತದೆ – ಪ್ರಾಣಿಗಳು ಮತ್ತು ಸಸ್ಯಗಳಿಗೆ ನೀರಡಿಕೆಯಾಗಿದೆ ಎಂದು ನಿಮಗೆ ಹೇಗೆ ತಿಳಿಯುತ್ತದೆ? ಎಲ್ಲ ಪ್ರಾಣಿಗಳು/ಸಸ್ಯಗಳಿಗೆ ಒಂದೇ ಪ್ರಮಾಣದ ನೀರು ಬೇಕಾಗುತ್ತದೆಯೆ? ಯಾವ ಪ್ರಾಣಿಗಳು/ಸಸ್ಯಗಳಿಗೆ ಅತ್ಯಂತ ಕಡಮೆ ನೀರಿನ ಅಗತ್ಯವಿದೆ? | ಸಸ್ಯಗಳು ಮತ್ತು ಪ್ರಾಣಿಗಳಿಗೆ ನೀರು. | | ಬರೆಯುವ ಚಟುವಟಿಕೆ ಇವುಗಳನ್ನು ಗುಂಪಿನಲ್ಲಿ ಮಾಡುವುದು. |
| ***ನೀರಿನ ಕೊರತೆ***<br>ಯಾವಾಗ ನೀರನ್ನು ಪಡೆಯುವುದು ಕಷ್ಟವಾಗುತ್ತದೆ? ನೀವಿರುವ ಪ್ರದೇಶದಲ್ಲಿ ನೀರಿಗಾಗಿ ಯಾವಾಗಲೂ ಪರದಾಡುತ್ತಿರುವ ಜನರಿದ್ದಾರೆಯೆ? ನಮಗೆ ನೀರೇ ಇಲ್ಲದಿದ್ದರೆ ಏನಾಗಬಹುದು? ನೀರನ್ನು ಪೋಲು ಮಾಡುತ್ತಿರುವುದುನ್ನು ನೀವು ನೋಡಿದ್ದೀರಾ – ಹೇಗೆ? ಅದನ್ನು ನಾವು ಹೇಗೆ ತಪ್ಪಿಸಬಹುದು? ನೀವು ನೀರನ್ನು ಪುನರ್ಬಳಕೆ ಮಾಡುತ್ತೀರಾ? | ನೀರಿನ ಕೊರತೆ, ಪೋಲು ಮಾಡುವಿಕೆ ಮತ್ತು ಪುನರ್ಬಳಕೆ, ನೀರು ಸಂಗ್ರಹಣೆ. | ಗ್ರಂಥಾಲಯ ಸಂಪನ್ಮೂಲ – ಚಿತ್ರಗಳೊಂದಿಗೆ ಒಂಟೆ, ಕಾಕ್ಟಸ್ ಬಗ್ಗೆ ಸಂಕ್ಷಿಪ್ತ ಮಾಹಿತಿ. | ನೀರನ್ನು ಉಪಯೋಗಿಸುವ ವಿವಿಧ ಚಟುವಟಿಕೆಗಳನ್ನು ಅಭಿನಯಿ ಸುವುದು/ ಮಳೆಗಾಲದ ಒಂದು ದಿನ, ನೀರನ್ನು ಉಪಯೋಗಿಸುವ ಚಟುವಟಿಕೆಗಳನ್ನು ಪಟ್ಟಿ ಮಾಡುವುದು, ತರಗತಿಯಲ್ಲಿ ಒಟ್ಟಾಗಿ ಮಳೆ/ನದಿ/ನೀರಿನ ಹಾಡಗಳನ್ನು ಹಾಡುವುದು / ಕವನಗಳನ್ನು ಓದುವುದು . |
| ***ನಮ್ಮ ಬದುಕಿನಲ್ಲಿ ನೀರು***<br>ನಿಮ್ಮ ಯಾವ ದೈನಂದಿನ ಚಟುವಟಿಕೆಗಳಲ್ಲಿ ನೀರು ಬಳಸಲ್ಪಡುತ್ತದೆ? ಮನೆಯೊಳಗೆ ಬರುವ ಮುನ್ನ ನೀವು ಮತ್ತು ನಿಮಗೆ ಗೊತ್ತಿರುವ | | ನೀರಿನ ಕೊರತೆಯ/ನೀರು ಪೋಲಾಗುತ್ತಿರುವ ಬಗ್ಗೆ ವೃತ್ತ ಪತ್ರಿಕೆಯ ತುಣುಕುಗಳು. | ವಿವಿಧ ಪಾತ್ರೆಗಳ ಚಿತ್ರಗಳನ್ನು ಬಿಡಿಸುವುದು. ಅಳತೆ ಮಾಡುವ ಚಟುವಟಿಕೆಗಳು; ಪ್ರಮಾಣವನ್ನು ಕಾಪಾಡುವುದನ್ನು ಅರ್ಥಮಾಡಿ ಕೊಳ್ಳಲು ನೆರವಾಗಲೆಂದು ಪ್ರಾತ್ಯಕ್ಷಿಕೆ. ವಿವಿಧ ಪಾತ್ರೆಗಳನ್ನು ಸ್ಪರ್ಶಿಸುವುದು |

| | | | |
|---|---|---|---|
| ಇತರರು ಕೈ ಕಾಲು ತೊಳೆಯುತ್ತೀರಾ? ನಿಮ್ಮ ಪ್ರಕಾರ ಇದನ್ನು ಏಕೆ ಮಾಡುತ್ತಾರೆ?<br>ಮಳೆಗಾಲದ ಒಂದು ದಿನವನ್ನು ವಿವರಿಸಬಲ್ಲಿರಾ. ಪಕ್ಷಿ, ಪ್ರಾಣಿ, ಸಸ್ಯ ಮತ್ತು ನಿಮ್ಮ ಬಗ್ಗೆ ವಿವರಗಳೊಂದಿಗೆ. | ವಿಭಿನ್ನ ಚಟುವಟಿಕೆಗಳಲ್ಲಿ ನೀರಿನ ಬಳಕೆ; ನೀರು, ಮಳೆ ನದಿಗಳ ಬಗ್ಗೆ ಸಾಂಸ್ಕೃತಿಕ ಅಭಿವ್ಯಕ್ತಿಗಳು; ಮಳೆ ಮತ್ತು ಅದಕ್ಕೆ ಪ್ರಾಣಿ, ಸಸ್ಯಗಳ ಪ್ರತಿಕ್ರಿಯೆ ಬಗ್ಗೆ ಅವಲೋಕನಗಳು. | ಗ್ರಂಥಾಲಯ ಸಂಪನ್ಮೂಲಗಳು, ದೈನಂದಿನ ಬದುಕಿಗೆ ಸಂಬಂಧಿಸಿದಂತೆ ಅವಲೋಕನಗಳು. ನೀರು/ ನದಿ/ ಮಳೆ, ಬಗ್ಗೆ ಹಾಡುಗಳು? | ಮತ್ತು ಅವುಗಳಿಗೆ ಬಲಸಲಾದ ಕಚ್ಚಾ ವಸ್ತುವಿನ ಬಗ್ಗೆ ಚರ್ಚೆ.<br>. |
| ***ನೀರಿನ ಶೇಖರಣೆ***<br>ನೀವು ನಿಮ್ಮ ಮನೆಯಲ್ಲಿ ನೀರನ್ನು ಹೇಗೆ ಶೇಖರಿಸುತ್ತೀರಿ? ನೀವು ಮಳೆನೀರನ್ನು ಸಂಗ್ರಹಿಸುತ್ತೀರಾ – ಹೇಗೆ? ಪ್ರತಿದಿನ ನೀವು ಎಷ್ಟು ನೀರನ್ನು ಶೇಖರಿಸುತ್ತೀರಾ? ಕುಡಿಯಲು ಮತ್ತು ಸ್ನಾನ ಮಾಡಲು ಎಷ್ಟು ಪ್ರಮಾಣದ ನೀರನ್ನು ಬಳಕೆ ಮಾಡುತ್ತೀರಾ? ಕುಡಿಯಲು/ ತೊಳೆಯಲು/ಅಥವಾ ಪ್ರಾಣಿಗಳಿಗೆ ನೀರನ್ನು ಶೇಖರಿಸಿಡಲು ಯಾವ ರೀತಿಯ ಪಾತ್ರೆಗಳನ್ನು ಬಳಸುತ್ತೀರಾ? ಅವು ಯಾವುದರಿಂದ ಮಾಡಲ್ಪಟ್ಟಿವೆ? ಒಂದು ದೊಡ್ಡ ಮತ್ತು ಚಿಕ್ಕ ಪಾತ್ರೆಯಲ್ಲಿ ನೀರಿನ ಮಟ್ಟ ಒಂದೇ ಇದ್ದರೆ ಅವುಗಳ ನೀರಿನ ಪ್ರಮಾಣ ಸಮನಾಗಿದೆ ಎಂದು ಅರ್ಥವೆ? | ಬಕೆಟ್, ಮಡಕೆ ಇತ್ಯಾದಿಗಳಂತಹ ಪ್ರಾಮಾಣಿತ ವಲ್ಲದ ಘಟಕ ಅಳತೆಗಳ ಮೂಲಕ ನೀರಿನ ಪ್ರಮಾಣವನ್ನು ಅಳೆಯುವುದು. ವಿವಿಧ ಮನೆಬಳಕೆಯ ಚಟುವಟಿಕೆಗಳಿಗೆ ಉಪಯೋಗಿಸುವ ನೀರಿನ ಪ್ರಮಾಣದ ಅಂದಾಜು; ಎಚ್ಚರಿಕೆಯಿಂದ ನೀರನ್ನು ಬಳಸುವುದು. ವಿವಿಧ ಉದ್ದೇಶಗಳಿಗಾಗಿ | ಮಗುವಿನ ದಿನನಿತ್ಯ ಬದುಕಿನ ಅನುಭವ, ವಿವಿಧ ಆಕಾರ/ಗಾತ್ರ/ ಕಚ್ಚಾ ವಸ್ತುಗಳ ಬಾಟಲಿಗಳು; *ಪಂಚತಂತ್ರ* ಕತೆ. | ಓದುವುದು ಮತ್ತು ಚರ್ಚೆ, ಒಂದು ಹಳ್ಳಿ / ಸಮುದ್ರ/ಕಾಡು/ ಪರ್ವತ ದೃಶ್ಯದ ಚಿತ್ರವನ್ನು ಬಿಡಿಸುವುದು. |

| | | | |
|---|---|---|---|
| **5. ಪ್ರಯಾಣ**<br>***ವಿವಿಧ ಪ್ರದೇಶಗಳಿಗೆ ಹೋಗುವುದು***<br>ನಿಮ್ಮ ಕುಟುಂಬವು ಬೇರೊಂದು ಸ್ಥಳಕ್ಕೆ ಒಟ್ಟಾಗಿ ಪ್ರಯಾಣ ಮಾಡಿದೆಯೆ? ಎಲ್ಲಿಗೆ ಮತ್ತು ಯಾತಕ್ಕಾಗಿ? ನೀವು ಹೇಗೆ ಹೋದಿರಿ? ಅದು ಎಷ್ಟು ಸಮಯ ತೆಗೆದುಕೊಂಡಿತು? ನಿಮ್ಮ ಅಜ್ಜಅಜ್ಜಿಯರು (ಅಥವಾ ಇತರ ಹಿರಿಯರು) ಚಿಕ್ಕವರಿದ್ದಾಗ ಎಷ್ಟು ದೂರ ಪ್ರಯಾಣ ಮಾಡಿದ್ದರು? ಆಗಿನ ಕಾಲದಲ್ಲಿ ಜನರು ಹೇಗೆ ಪ್ರಯಾಣ ಮಾಡುತ್ತಿದ್ದರು? ಈಗ ಜನರು ಮರುಭೂಮಿ. ಗುಡ್ಡಗಾಡು, ಸಮುದ್ರ ಇತ್ಯಾದಿಗಳಲ್ಲಿ ಹೇಗೆ ಪ್ರಯಾಣಿಸುತ್ತಾರೆ?<br><br>***ಪ್ರಯಾಣದ ವಿಧಗಳು***<br>ನಾವು ಶಾಲೆಗೆ ಹೇಗೆ ಹೋಗುತ್ತೇವೆ? ನಾವು ಇತರ ಸ್ಥಳಗಳಿಗೆ ಹೇಗೆ ಹೋಗುತ್ತೇವೆ? ನಾವು ಎಷ್ಟು ವಿಭಿನ್ನ ವಿಧಾನಗಳಲ್ಲಿ ಪ್ರಯಾಣ ಮಾಡಿದ್ದೇವೆ? ನಮಗೆ | ನೀರನ್ನು ಶೇಖರಿಸಲು ಉಪಯೋಗಿಸುವ ವಿಭಿನ್ನ ಆಕಾರದ ಮತ್ತು ಕಚ್ಚಾ ವಸ್ತುಗಳಿಂದ ತಾಯಾರಿಸಲ್ಪಟ್ಟ ಪಾತ್ರೆಗಳು; ಪ್ರಮಾಣವನ್ನು ಕಾಪಾಡುವ ಪರಿಕಲ್ಪನಾತ್ಮಕ ಬೆಳವಣಿಗೆ.<br><br>ಪ್ರಯಾಣದ ಅಗತ್ಯ, ಇರುವ ಪ್ರದೇಶದಲ್ಲಿ ಮತ್ತು ಪ್ರದೇಶದಾಚೆ ಪ್ರಯಾಣ ಮಾಡುವುದು; ಕಾಡು, ಹಳ್ಳಿ, ನಗರ ಇತ್ಯಾದಿ ವಿವಿಧ ಸಾಮಾಜಿಕ ಸ್ಥಳಗಳಿಗೆ ಪ್ರವಾಸ ಹೋಗುವುದು; ವಲಸೆ ಹೋಗಲು, ಪ್ರೇಕ್ಷಣೀಯ ಸ್ಥಳಗಳನ್ನು ನೋಡಲು, ಕುಟುಂಬದ ಸಮಾರಂಭಗಳು ಇತ್ಯಾದಿ ಕಾರಣಗಳಿಗೆ ಪ್ರಯಾಣ ಮಾಡುವುದು. | ನದಿ, ಪರ್ವತ ಇತ್ಯಾದಿಯ ಉದ್ದಕ್ಕೂ ಪಯಣಿಸಿದ ಒಂದು ಕಥೆ | ಸಾರಿಗೆಯ ವಿವಿಧ ವಿಧಗಳ ಚಿತ್ರಗಳನ್ನು ಸಂಗ್ರಹಿಸಿ; ಅವುಗಳನ್ನು ವಿವಿಧ ಸಾರಿಗೆ ವಿಧಗಳಾಗಿ ವರ್ಗೀಕರಿಸಿ; ರೈಲು ಪಯಾಣ/ರೈಲ್ವೆ ನಿಲ್ದಾಣವನ್ನು ಅಭಿನಯಿಸಿ. ಸಾಮಾನು ತುಂಬುವುದು, ತೂಕ ಮಾಡುವುದು, ರೈಲುಗಳನ್ನು ತೊಳೆಯುವುದು, ಸೂಚನೆಗಳನ್ನು ಕೊಡುವುದು, ಟೀ ಮಾರುವುದು, ಹಳಿಯನ್ನು ದಾಟುವುದು ಇತ್ಯಾದಿ ಚಟುವಟಿಕೆಗಳನ್ನು ಗಮನಿಸುವುದು.<br><br>ಮೂಕರಾಗಿ ನಟಿಸುವ ಮೂಲಕ ಪದಬಂಧ ಸಮಸ್ಯೆಯ ಆಟ, ಮಾತನಾಡದೆ ಇರುವ ಸನ್ನಿವೇಶಗಳನ್ನು ಅಭಿನಯಿಸುವುದು, ಸಂಕೇತ ಭಾಷೆಯನ್ನು ಕಲಿಯುವುದು, |

| | | | |
|---|---|---|---|
| ಪ್ರಯಾಣದ ಎಷ್ಟು ವಿಧಗಳು ಗೊತ್ತಿವೆ? ನೀವು ರೈಲ್ವೇ ನಿಲ್ದಾಣಕ್ಕೆ ಹೋಗಿದ್ದೀರಾ? ನೀವು ಅಲ್ಲಿ ಏನೆಲ್ಲಾ ನೋಡುತ್ತೀರಾ? ನಿಲ್ದಾಣದಲ್ಲಿ ಮತ್ತು ರೈಲಿನಲ್ಲಿ ಕೆಲಸ ಮಾಡುವವರೆಲ್ಲರು ಯಾರು? ಜನರು ಹಿಂದೆ ಹೇಗೆ ಪ್ರಯಾಣಿಸುತ್ತಿದ್ದರು? | ಸಾರಿಗೆಯ ವಿವಿಧ ವಿಧಾನಗಳು; ಹತ್ತಿರದ, ದೂರದ, ಪ್ರಯಾಣದ ಹೊಸ ವಿಧಾನಗಳು. ರೈಲ್ವೆಯಲ್ಲಿ/ ನಿಲ್ದಾಣಗಳಲ್ಲಿ ಕೆಲಸ ಮಾಡುವ ವಿವಿಧ ವಿಧದ ಕೆಲಸಗಾರರು. | ಸಾರಿಗೆ ವಿಧಾನಗಳ ಚಿತ್ರಗಳು; | ಮುದ್ರೆಗಳನ್ನು ಅಭ್ಯಾಸ ಮಾಡುವುದು.<br><br>ಸ್ಥಳೀಯ ಅಂಚೆ ಕಚೇರಿಗೆ ಹೋಗುವುದು, ವಿಂಗಡಣೆ, ಸ್ಟಾಂಪ್ ಮಾಡುವುದು , ತೂಕ ಮಾಡುವುದು ಇತ್ಯಾದಿಗಳ ವೀಕ್ಷಣೆ. |
| ***ನುಡಿಯದೆ ಮಾತನಾಡುವುದು***<br>ನಾನು ಮಾತನಾಡದಿದ್ದರೆ ನಾನು ಏನು ಹೇಳಬೇಕೊ ಅದನ್ನು ಜನರಿಗೆ ಹೇಳುವುದು ಹೇಗೆ? | ಮಾತನಾಡದೆ ಮಾಡುವ ಸಂವಾದ, ಸಂಕೇತ ಭಾಷೆ, ನೃತ್ಯ ಮುದ್ರೆಗಳ ಬಳಕೆ. | ಸಂಕೇತ ಭಾಷೆ, ನೃತ್ಯದ ಮುದ್ರೆಗಳು. | ಆವೆಮಣ್ಣಿನ ಮಡಕೆಗಳನ್ನು ಮಾಡುವುದು; ದುಂಡು ಪಟ್ಟಿಗಳನ್ನು ಬಳಸಿಕೊಂಡು ಕೂಡ; ವಿವಿಧ ವಿಧಗಳ ಆವೆಮಣ್ಣಿನೊಂದಿಗೆ; ಬಿಸಿಲಿನಲ್ಲಿ ಒಣಗಿಸುವುದು; ಇವನ್ನು ಹೇಗೆ ಸುಡುತ್ತಾರೆ/ ಕುಲುಮೆಗಳಲ್ಲಿ ಹೇಗೆ ಬೇಯಿಸುತ್ತಾರೆ |
| ***ಪತ್ರಗಳನ್ನು ಅಂಚೆಗೆ ಹಾಕುವುದು***<br>ನಾನು ಪತ್ರವನ್ನು ಅಂಚೆಗೆ ಹಾಕಿದಾಗ ಏನಾಗುತ್ತದೆ? ಅದು ನನ್ನ ಸ್ನೇಹಿತನಿಗೆ ಹೇಗೆ ತಲುಪುತ್ತದೆ? ಅದನ್ನು ಸಾಧ್ಯವಾಗಿಸಲು ಸಹಾಯ | | | |

| | | | |
|---|---|---|---|
| ಮಾಡುವವರು ಯಾರು? ಸಂದೇಶವನ್ನು ಕಳುಹಿಸಲು ಬೇರೆ ಮಾರ್ಗಗಳಿವೆಯೆ? ಹಿಂದೆ ಪತ್ರಗಳನ್ನು ಹೇಗೆ ಕಳುಹಿಸಲಾಗುತ್ತಿತ್ತು? | ಸಂವಹನದ ಒಂದು ಸಾಧನವಾಗಿ ಪತ್ರ, ಅಂಚೆ ಕಚೇರಿಯ ಕೆಲಸ ಮತ್ತು ಅದರಲ್ಲಿ ತೊಡಗಿ ಕೊಂಡಿರುವ ಜನರು; ಸಂವಹನದ ವಿವಿಧ ವಿಧಾನಗಳು, ಕಾಲದೊಂದಿಗೆ ಬದಲಾವಣೆ. | ಸ್ಥಳೀಯ ಅಂಚೆ ಕಚೇರಿ, ಅಂತರ್ದೇಶೀಯ, ಅಂಚೆ ಕಾರ್ಡು, ಶುಭಾಶಯ ಕಾರ್ಡುಗಳು, ಇತ್ಯಾದಿ ವಿವಿಧ ಮಾದರಿಯ ಪತ್ರಗಳು. ಅಂಚೆ ಕಚೇರಿಯ ಕೆಲಸಗಾರ ರೊಂದಿಗೆ ಚರ್ಚೆ. | ಎಂದು ತಿಳಿದುಕೊಳ್ಳಲು ಕುಂಬಾರರು ಅಥವಾ ಇಟ್ಟಿಗೆ ಮಾಡುವವರ ಹತ್ತಿರ ಮಾತನಾಡುವುದು. ಆವೆಮಣ್ಣಿನಿಂದ ವಿವಿಧ ಒಡವೆ ಇತ್ಯಾದಿಗಳನ್ನು ಮಾಡುವುದು. |
| **6.ನಾವು ಸೃಷ್ಟಿಸುವ ಮತ್ತು ಮಾಡುವ ಸಂಗತಿಗಳು**<br>***ಕುಂಬಾರಿಕೆ***<br>ನಾವು ನಮ್ಮ ಸುತ್ತಮುತ್ತ ಯಾವತರಹದ ಮಣ್ಣಿನ ಮಡಕೆಗಳನ್ನು ನೋಡುತ್ತೇವೆ? ಧಾನ್ಯಗಳನ್ನು ಶೇಖರಿಸಿಡಲು ಯಾವ ತರಹದ ಪಾತ್ರೆಗಳನ್ನು ಉಪಯೋಗಿಸಲಾಗುತ್ತದೆ? ಬಹಳ ಹಿಂದೆ ಕುಂಬಾರರು ಬಳಸುವ ಚಕ್ರವಿಲ್ಲದಿದ್ದಾಗ ಜನರು ಯಾವ ತರಹದ ಪಾತ್ರೆಗಳನ್ನು ಆವೆಮಣ್ಣಿನ ದುಂಡುಪಟ್ಟಿಗಳ ಮೂಲಕ ಮಾಡುತ್ತಿದ್ದರು? ಅಂತಹ ಮಡಕೆಗಳನ್ನು ನೀವು ಮಾಡಿ ಬಿಸಿಲಿನಲ್ಲಿ ಒಣಗಿಸಲು ಆಗುತ್ತದೆಯೆ – ನಿಮ್ಮ ಪ್ರಕಾರ ಅವು ಎಷ್ಟು ಕಾಲ ಬಾಳಬಹುದು? ಕುಂಬಾರನು ಅವುಗಳನ್ನು ಹೇಗೆ ಬೇಯಿಸುತ್ತಾನೆ? | ಮೂಲಭೂತ ಅಗತ್ಯಗಳಿಗಾಗಿ ಮನುಷ್ಯರು ಹಲವು ವಸ್ತುಗಳನ್ನು ಮಾಡುತ್ತಾರೆ; ಅದಕ್ಕೆ ನೈಸರ್ಗಿಕ ಸಂಪನ್ಮೂಲಗಳು, ಸೃಜನಶೀಲತೆ ಬೇಕಾಗುತ್ತದೆ; ನಾವು ಬದುಕುವ ರೀತಿಯನ್ನು ಅವು ಬದಲಿಸಿವೆ. ಕುಂಬಾರನ ಚಕ್ರವಿಲ್ಲದ ಕಾಲದಲ್ಲಿ ಬಹಳ ಹಿಂದೆ ಶೇಖರಣೆ ಮಾಡಲು ಎಂತಹ ಮಡಕೆಗಳನ್ನು ಮಾಡಿರಬಹುದು | ಪ್ರಾಚೀನ ಕಾಲದಲ್ಲಿ ಆವೆಮಣ್ಣಿನ ದುಂಡುಪಟ್ಟಿಗಳ ಮೂಲಕ ಮಾಡಿದ ಮಡಕೆ ಮತ್ತು ಇತರ ಪಾತ್ರೆಗಳ ಕಥನ ಮತ್ತು ಸಚಿತ್ರ ವಿವರಣೆಗಳು (ಉದಾ:ಏಕಲವ್ಯ ಅವರ ಸಾಮಾಜಿಕ ಅಧ್ಯಯನಗಳ ಪುಸ್ತಕ). | ವಿಭಿನ್ನ ಜನರು ಏನು ಮಾಡುತ್ತಾರೆ ಎಂಬುದನ್ನುಅನು ಕರಿಸಲು ಮತ್ತು ತಮ್ಮದೇ ಆದ ಹೊಸ ವಿನ್ಯಾಸಗಳನ್ನು ಸೃಷ್ಟಿಸಿಕೊಳ್ಳಲು ವಿವಿಧ ಶೈಲಿಗಳಲ್ಲಿ ದುಪ್ಪಟ್ಟಾ ಅಥವಾ ಉದ್ದನೆಯ ಬಟ್ಟೆಯೊಂದನ್ನು ಧರಿಸಿಕೊಳ್ಳುವ / ಉಡುವ ಚಟುವಟಿಕೆ. ಬಣ್ಣಗಳನ್ನು ಬೆರೆಸುವುದು ಮತ್ತು ಬಣ್ಣಗಳೊಂದಿಗೆ ಆಟ ಆಡುವುದು; ಬಟ್ಟೆಗಳಿಗೆ ಬಣ್ಣ ಹಾಕಲು ಬಣ್ಣವನ್ನು ಬಳಸುವುದು; ಆಲೂಗೆಡ್ಡೆ ಅಥವಾ ಬೆಂಡೆಕಾಯಿಗಳ |

| | | | |
|---|---|---|---|
| ***ಜವಳಿಗಳು***<br>ಹೊಲಿಯದೆ ಎಷ್ಟು ವಿವಿಧ ರೀತಿಗಳಲ್ಲಿ ಒಂದು ಉದ್ದನೆಯ ಬಟ್ಟೆಯನ್ನು ಧರಿಸಬಹುದು? ದೇಶದ ವಿಭಿನ್ನ ಭಾಗದಲ್ಲಿ ನೀವು ನೋಡಿರುವಂತೆ ಜನರು ಧರಿಸುವ ಸೀರೆ ಮತ್ತು ಲುಂಗಿಯ ವಿಧಗಳೆಷ್ಟು? ನಮಗೆ ಎಷ್ಟು ತರಹದ ಬಣ್ಣಗಳು ಗೊತ್ತಿವೆ – ಎಷ್ಟು ಹೊಸ ಬಣ್ಣಗಳನ್ನು ನಾವು ಸೃಷ್ಟಿಸಬಹುದು? ಮಾಸದ ಬಣ್ಣಗಳಾವುವು ಮತ್ತು ಬಣ್ಣಗಳು ಹೋದಾಗ ನಾವು ಎದುರಿಸುವ ಸಮಸ್ಯೆಗಳೇನು? ನಮ್ಮದೇ ಆದ ತರಕಾರಿ ಪಡಿಅಚ್ಚು ಮುದ್ರಣಗಳನ್ನು ಹೇಗೆ ಮಾಡುತ್ತೇವೆ ಮತ್ತು ಟೈ-ಡೈ (ಬಣ್ಣ ಹಾಕುವುದು ಮತ್ತು/ ಬಣ್ಣ ತಾಕದಂತೆ ಕಟ್ಟುವುದು) ವಿಧಾನವನ್ನು ಬಳಸುತ್ತೇವೆ.<br><br>1. **ಕುಟುಂಬ ಮತ್ತು ಸ್ನೇಹಿತರು**<br>**1.1 ಸಂಬಂಧಗಳು**<br>***ಒಂದು ಮಗುವಾಗಿ*** | ಎನ್ನುವುದರ ಕಲ್ಪನೆ. ಆವೆಮಣ್ಣಿನಿಂದ ಅಂತಹ ಮಡಕೆಗಳನ್ನು ಮಾಡುವ, ಅನುಭವ; ಒಣಗಿಸುವ, ಮತ್ತು ಅವನ್ನು ಸದೃಢಗೊಳಿಸಲು ಬೇಯಿಸಬೇಕಾದ ಅಗತ್ಯ.<br><br>ಹೊಲಿಯದ ಬಟ್ಟೆಗಳೂ ಸೇರಿದಂತೆ ನಾವು ಧರಿಸುವ ಬಟ್ಟೆಗಳಲ್ಲಿರುವ ವೈವಿಧ್ಯತೆ;. ಜವಳಿಯಲ್ಲಿ ಬಣ್ಣ ಮತ್ತು ವಿನ್ಯಾಸಗಳನ್ನು ಬಳಸಲಾಗುತ್ತದೆ; ಸೃಜನಶೀಲತೆಗೆ ಅವಕಾಶ; ತರಕಾರಿಜನ್ಯ ಬಣ್ಣಗಳು. | ಉಡುಗೆಗೆಳ ವಿವಿಧ ಶೈಲಿಗಳ ಕಲ್ಪನೆ; ಹೊಲಿಯದ ಸಾಂಪ್ರದಾಯಿಕ ಉಡುಗೆಗಳು ಮತ್ತು ಅದನ್ನು ಉಡುವ ವಿವಿಧ ಶೈಲಿಗಳು.<br><br>ಬಣ್ಣಗಳನ್ನು ಬೆರೆಸಿ ಹೊಸ ಬಣ್ಣಗಳನ್ನು ಮಾಡುವ ಬಗ್ಗೆ ಒಂದು ಕಲ್ಪನೆ; ಮಾಸದ ಬಣ್ಣಗಳು ಮತ್ತು ಬಣ್ಣ ಹೋಗುವುದು; ಟೈ- ಡೈ ವಿಧಾನ; ಪಡಿಅಚ್ಚು ಮುದ್ರಣ ಮತ್ತು ತರಕಾರಿಗಳನ್ನು ಉಪಯೋಗಿಸಿ ನಮ್ಮದೆ ಪಡಿಅಚ್ಚುಗಳನ್ನು ಮಾಡುವುದು. ಪಡಿಅಚ್ಚುಗಳ ಮತ್ತು ಬಣ್ಣಗಳ ನಮೂನೆಗಳು. | ಅಚ್ಚನ್ನು ಮಾಡಿ ಅದನ್ನು ಕಾಗದದ ಮೇಲೆ ಮುದ್ರಿಸುವುದು.<br><br>ತಾಯಿಯನ್ನು ಅವರ ಬಾಲ್ಯದ ಬಗ್ಗೆ ಪ್ರಶ್ನಿಸುವುದು.<br><br>ಕತೆ ಹೇಳುವುದು ಮತ್ತು ಚರ್ಚೆ.<br><br>ಕುಟುಂಬದ ಮೌಲ್ಯಗಳು, ಕುಟುಂಬದೊಳಗಿನ ಅಭ್ಯಾಸಗಳ ಬಗ್ಗೆ ಚರ್ಚೆ ; |

| | | | |
|---|---|---|---|
| ***ನಿಮ್ಮ ತಾಯಿ***<br>ನಿಮ್ಮ ತಾಯಿಯು ನಿಮ್ಮ ವಯಸ್ಸಿನವರಾಗಿದ್ದಾಗ ಅವರು ಯಾವ ಸಂಬಂಧಿಕರ ಜೊತೆಯಲ್ಲಿ ಇದ್ದರು?<br><br>***ಶಿಶುಗಳು ಎಲ್ಲಿಂದ ಬರುತ್ತವೆ?***<br>ನೀವು ಒಂದು ನವಜಾತ ಶಿಶುವನ್ನು ನೋಡಿದ್ದೀರಾ –ಅದು ಎಲ್ಲಿಂದ ಬಂದಿತು? ನಾಯಿಮರಿ/ ಬೆಕ್ಕಿನ ಮರಿ/ಕರು/ ಕೋಳಿಮರಿ ಎಲ್ಲಿಂದ ಬರುತ್ತವೆ?<br>ಒಂದು ಮಗುವನ್ನು ನೋಡಿಕೊಳ್ಳುತ್ತಿರುವ/ ದತ್ತು ತೆಗೆದುಕೊಂಡಿರುವ ಜನರು ಯಾರಾದರೂ ನಿಮಗೆ ಗೊತ್ತಿದ್ದಾರೆಯೆ?<br><br>***ನನ್ನ ವಿಸ್ತೃತ ಕುಟುಂಬ***<br>ನಿಮ್ಮ ಕುಟುಂಬದ ಸದಸ್ಯರಿಂದ ಕಲಿಯಲಿರುವ ಸಂಗತಿಗಳಿವೆಯೆ? ಏನು? ನಿಮ್ಮ ಕುಟುಂಬದವರಿಗಿಂತ ಭಿನ್ನವಾಗಿ ನೀವೇನಾದರೂ ಮಾಡುತ್ತೀರಾ? ನಿಮ್ಮ ಕುಟುಂಬದ ಸದಸ್ಯರೆಲ್ಲರೂ ಯಾವಾಗಲೂ ನಿಮ್ಮ ಜೊತೆಯಲ್ಲೇ ವಾಸಿಸುತ್ತಾರೆಯೆ? ನಿಮ್ಮ ಜೊತೆ ವಾಸಿಸದೆ ಇರುವ ನಿಮ್ಮ ಕುಟುಂಬದ ಸದಸ್ಯರನ್ನು ನೀವು ಯಾವಾಗ ಭೇಟಿಯಾಗುತ್ತೀರಿ? | **ತರಗತಿ IV ಪರಿಸರ**<br><br>ಜನರು ಒಟ್ಟಾಗಿ ವಾಸಿಸುವಲ್ಲಿ ಕಾಲಾನಂತರ ಆಗಿರುವ ಬದಲಾವಣೆಗಳು. ಇಂದಿನ ವಂಶವೃಕ್ಷ.<br><br>ತಾಯಿಯ ದೇಹದಿಂದ; ತಾಯಿ-ಮಗುವಿನ ಸಂಬಂಧ; ಸಾಕುತಂದೆತಾಯಿಗಳು ಮತ್ತು ದತ್ತು ತೆಗೆದು ಕೊಳ್ಳುವುದು.<br><br>ಒಂದು ಅಣುರೂಪವಾಗಿ ಕುಟುಂಬ; (ಕುಟುಂಬದ ಮೌಲ್ಯಗಳು – ಲಿಂಗತ್ವ, ಗಳಿಸುವ ಸಾಮರ್ಥ್ಯ, ನಿರ್ಧಾರ ತೆಗೆದು ಕೊಳ್ಳುವುದು, | **ಅಧ್ಯಯನಗಳು**<br><br>ತಾಯಿ, ಅಜ್ಜ ಅಜ್ಜಿ ಮತ್ತು ಇತರ ಸಂಬಂಧಿಕರೊಂದಿಗೆ ಚರ್ಚೆ.<br><br>*ಕ್ಯಾ ತುಮ್ ಮೆರಿ ಅಮ್ಮಾ ಹೊ?* (ಎನ್ ಬಿ ಟಿ ಕತೆ)<br><br>ಕುಟುಂಬದ ಸದಸ್ಯರುಗಳು, ಕುಟುಂಬದ ಛಾಯಾಚಿತ್ರಗಳು. | ಕುಟುಂಬದ ಸಮಾರಂಭಗಳ ಬಗ್ಗೆ ಚರ್ಚೆ.<br><br>ಊಹಿಸುವ ಆಟ: ಮಕ್ಕಳು ಕಣ್ಣು ಮುಚ್ಚಿಕೊಂಡು ವಿವಿಧ ವಸ್ತುಗಳನ್ನು ಮುಟ್ಟುವ ಗುಂಪು ಚಟುವಟಿಕೆ. |

| | | | |
|---|---|---|---|
| ಯಾವ ಹಬ್ಬವನ್ನು ನೀವು ಒಟ್ಟಾಗಿ ಆಚರಿಸುತ್ತೀರಿ?<br><br>***ಕಣ್ಣು ಮುಚ್ಚಿ ಸುತ್ತಮುತ್ತಲಿನದನ್ನು ಗ್ರಹಿಸುವುದು***<br>ನಿಮ್ಮ ಕಣ್ಣು ಮತ್ತು ಕಿವಿಗಳನ್ನು ಮುಚ್ಚಿ ನಿಮ್ಮ ಜೊತೆ ವಾಸಿಸುವ ಜನರನ್ನು/ಪ್ರಾಣಿಗಳನ್ನು ಕೇವಲ ಸ್ಪರ್ಶದಿಂದ /ವಾಸನೆಯಿಂದ ಗುರುತಿಸಬಲ್ಲಿರಾ? ಯಾವದನ್ನಾದರೂ ಅದು ತಂಪು/ ಬಿಸಿ, ಒದ್ದೆ/ ಒಣ, ನಯ /ಒರಟು, ಅಂಟು/ಜಾರು, ಮೆದು/ಗಟ್ಟಿ ಎನ್ನುವುದನ್ನು ಸ್ಪರ್ಶದಿಂದ ಹೇಳಬಲ್ಲಿರಾ? ನೀವು ಮುಟ್ಟಬಾರದಂತಹುದು ಯಾವುದಾದರೂ ಇದೆಯೆ? ಕೆಲವರು ನಿಮ್ಮನ್ನು ಮುಟ್ಟಿದರೆ ನಿಮಗೆ ಕಿರಿಕಿರಿಯಾಗುತ್ತದೆಯೆ?<br><br>**1.2 ಕೆಲಸ ಮತ್ತು ಆಟ**<br>***ಆಟದಲ್ಲಿ ಖುಷಿ ಮತ್ತು ಜಗಳಗಳು***<br>ನೀವು ಮನೆಯಲ್ಲಿ ಆಡುವ ಆಟವನ್ನೇ ಶಾಲೆಯಲ್ಲೂ | ಜಾತಿ, ಧಾರ್ಮಿಕ ಗ್ರಹಿಕೆಗಳು ಇತ್ಯಾದಿ.); ಕುಟುಂಬದ ಮೌಲ್ಯ ವ್ಯವಸ್ಥೆಯಲ್ಲಿ ಬದಲಾವಣೆಗಳು – ಸಮಾಜದಲ್ಲಿನ ಬದಲಾವಣೆಗಳಿಗೆ ಹಾದಿ ಮಾಡಿಕೊಡುತ್ತವೆ; ಹಬ್ಬಗಳು ಮತ್ತು ಕುಟುಂಬದ ಒಟ್ಟುಗೂಡುವಿಕೆ ಗಳು.<br><br>ವಿಕಲಚೇತನರ ಬಗ್ಗೆ ಸೂಕ್ಷ್ಮ ಗ್ರಾಹಿಯಾಗಿರುವುದು; ವಾಸನೆ ಮತ್ತು ಸ್ಪರ್ಶದ ಗ್ರಹಿಕೆ; ನೇವರಿಸುವಿಕೆ/ ಹೊಡೆತ ಗಳಿಗೆ ಸಂವೇಗಾತ್ಮಕ ಪ್ರತಿಕ್ರಿಯೆ; ‘ಒಳ್ಳೆ’ಯ ಮತ್ತು ‘ಕೆಟ್ಟ’ ಸ್ಪರ್ಶ. | <br><br>ಮಗುವಿನ ದಿನನಿತ್ಯ ಬದುಕಿನ ಅನುಭವ, ಅವಲೋಕನ; ವಾಸನೆ ಮತ್ತು ಸ್ಪರ್ಶಕ್ಕೆ ಸಂಬಂಧಿಸಿದ ಕಥನಗಳು; ಆಟಗಳು ಮತ್ತು ಚಟುವಟಿಕೆಗಳಿಗೆ ಬೇಕಾದ ಸಾಮಗ್ರಿಗಳು. | ಸ್ಥಳೀಯ ಆಟಗಳು ಮತ್ತು ಗುಂಪುಗಳಲ್ಲಿ ಜೊತೆಯಾಗಿ ಆಟವಾಡಲು ನಿಯಮಗಳನ್ನು ಚರ್ಚಿಸಿ ಯೋಜಿಸುವುದು; ಅವುಗಳನ್ನು ಬರೆದಿಡುವುದು.<br><br><br><br>ಜನರು ಮತ್ತು ಅವರ ವೃತ್ತಿಯ ಸಾಧನಗಳ ಚಿತ್ರವನ್ನು ಬಿಡಿಸುವುದು; |

| | | | |
|---|---|---|---|
| ಆಡುತ್ತೀರಾ? ನೀವು ಆಟವಾಡಲು ಯಾವ ವಸ್ತುಗಳನ್ನು ಬಳಸುತ್ತೀರಾ? ಶಾಲೆಯು ಇದನ್ನು ನಿಮಗೆ ಕೊಡುತ್ತದೆಯೆ? ನೀವು ಆಡುತ್ತಿರುವಾಗ ಜಗಳವಾಡುತ್ತೀರಾ? ಆಟದ ನಿಯಮಗಳನ್ನು ಹೇಗೆ ನಿರ್ಧರಿಸುತ್ತೀರಿ? ನೀವು ಆಡದಂತೆ ಯಾರಾದರೂ ತಡೆಯುತ್ತಾರೆಯೆ? ಯಾರು ಮತ್ತು ಏಕೆ? ನೀವು ನಿಮ್ಮ ನೆರೆಹೊರೆಯಲ್ಲಿರುವ ಪ್ರತಿ ಮಗುವಿನೊಂದಿಗೂ (ಹುಡುಗರು ಮತ್ತು ಹುಡುಗಿಯರು) ಆಡುತ್ತೀರಾ? ಕೆಲವು ಮಕ್ಕಳೊಂದಿಗೆ ನೀವು ಆಡಬಾರದೆಂದು ತಡೆಯಲಾಗುತ್ತದೆಯೆ? | ಮನೆ ಮತ್ತು ಶಾಲೆಯಲ್ಲಿ ವಿಭಿನ್ನ ಆಟಗಳು. ಒಂದು ಸಾಮಾಜಿಕ ಸಂಧಾನ ನಡೆಸುವ ವಿಧಾನವಾಗಿ ಆಟ; ಪ್ರತಿಯೊಂದು ಆಟದ ನಿಯಮಗಳು; ಜಗಳಗಳು ಮತ್ತು ಅದನ್ನು ಪರಿಹರಿಸುವ ಅಗತ್ಯ-ನ್ಯಾಯ ಯುತವಾದ ಆಟದ ಕಲ್ಪನೆಗಳು. ಆಟದ ಮೇಲಿನ ನಿರ್ಬಂಧಗಳು; ವಿಭಿನ್ನ ಲಿಂಗ ಅಥವಾ ವರ್ಗ/ಜಾತಿಯ ಹಿನ್ನೆಲೆಯ ಸಹ ಆಟಗಾರರು. | ಟಾಮ್ ಸಾಯೆರ್‌ರ ಕತೆ – 'ವೈಟ್ ವಾಷಿಂಗ್ ದಿ ಫೆನ್ಸ್' ಅಥವಾ 'ಕೆಲಸ' ಮತ್ತು 'ಆಟ'ದ ಬಗ್ಗೆ ಮತ್ತಾವುದಾದರೂ ಕತೆ | ಕೆಲವು ಜನರೊಂದಿಗೆ ಮಾತನಾಡುವುದು ಮತ್ತು ಅವರು ತಮ್ಮ ಕೌಶಲ್ಯಗಳನ್ನು ಹೇಗೆ ಕಲಿತರು ಎನ್ನುವುದನ್ನು ವಿವರಿಸುವುದು. |
| ***ಅವರು ಅವರ ಕೌಶಲಗಳನ್ನು ಹೇಗೆ ಕಲಿತರು*** ನಿಮ್ಮ ಪ್ರದೇಶದಲ್ಲಿ ಈ ಕೆಳಗಿನವುಗಳನ್ನು ಮಾಡುವ ಜನರ ಪರಿಚಯವಿದೆಯೇ: ಮಡಕೆಗಳನ್ನು ಮಾಡುವವರು/ ಬಟ್ಟೆಗಳನ್ನು ಹೊಲಿಯುವವರು/ ಚಪ್ಪಲಿಗಳನ್ನು ಮಾಡುವವರು/ಕಾಯಿಲೆ ಗುಣಪಡಿಸುವವರು/ಸೇತುವೆಗಳನ್ನು ಕಟ್ಟುವವರು/ಕಸೂತಿ ಹಾಕುವವರು/ ವಿಮಾನ ಹಾರಿಸುವವರು/ ಸೈಕಲ್ ದುರಸ್ತು ಮಾಡುವವರು / | ಸ್ಥಳೀಯ ಪ್ರದೇಶ/ ದೇಶದಲ್ಲಿರುವ ವಿಭಿನ್ನ ವೃತ್ತಿಗಳು. ಯಾರು ಯಾವ ಕೆಲಸವನ್ನು ಮಾಡುತ್ತಾರೆ. ಲಿಂಗತ್ವ ಮತ್ತು ಕೆಲಸ. | ಸ್ಥಳೀಯ ಕರಕುಶಲ ಕೆಲಸಗಾರರು ಮತ್ತು ಇತರೆ ವೃತ್ತಿಪರರು. | ಗುಂಪಿನಲ್ಲಿ ಗಾಳಿಪಟವನ್ನು ಮಾಡುವುದು ಮತ್ತು ಹಾರಿಸುವುದು, ಬುಗುರಿಯನ್ನು ಮಾಡುವುದು, ಜಾತ್ರೆ/ಸರ್ಕಸ್ ನಲ್ಲಿನ ಅನುಭವದ ಬಗ್ಗೆ ಒಂದು ಪ್ಯಾರಾವನ್ನು ಬರೆಯುವುದು. |

| | | | |
|---|---|---|---|
| ಬಸ್ಸುಗಳನ್ನು ಓಡಿಸುವವರು ಇತ್ಯಾದಿ? ಅವರನ್ನು ನೀವೆಷ್ಟು ಚೆನ್ನಾಗಿ ಬಲ್ಲಿರಿ – ಅವರ ಹೆಸರು, ಕುಟುಂಬ ಇತ್ಯಾದಿ? ಅವರು ತಮ್ಮ ಕೆಲಸಕ್ಕೆ ಯಾವ ಸಾಧನಗಳನ್ನು ಬಳಸುತ್ತಾರೆ?ಇವುಗಳನ್ನು ಮಾಡಲು ಅವರು ಎಲ್ಲಿ ಕಲಿತರು?<br><br>***ಜಾತ್ರೆ/ಸರ್ಕಸ್ ಗಳಲ್ಲಿ ಮಜಾಮಾಡುವುದು***<br>ನೀವು ಜಾತ್ರೆ ಅಥವಾ ಸರ್ಕಸ್ ಗೆ ಹೋಗಿದ್ದೀರಾ?ನಿಮಗೆ ತುಂಬಾ ಇಷ್ಟವಾದ ಸಂಗತಿ ಯಾವುದು – ಸವಾರಿ ಮಾಡಿದ್ದು, ಪಂದ್ಯವನ್ನಾಡಿದ್ದು, ನೀವು ಏನನ್ನಾದರೂ ನೋಡಿದ್ದು/ತಿಂದದ್ದು/ ಕೊಂಡುಕೊಂಡದ್ದು. ನೀವು ಯಾವಾಗ ಗಾಳಿಪಟವನ್ನು ಹಾರಿಸುತ್ತೀರಿ? ಅವು ಹಾರುವಂತೆ ಹೇಗೆ ಮಾಡುತ್ತೀರಿ? | ಮನರಂಜನೆಯ ವಿಧಗಳು. | ಸರ್ಕಸ್/ಜಾತ್ರೆ, *ಮೇಳದ* ಮೇಲೊಂದು ಕವನ. | ಹೂವುಗಳನ್ನು ಮತ್ತು ಅವುಗಳ ಬಳಿಬರುವ ಕೀಟಗಳನ್ನು ಅವಲೋಕಿಸುವುದು, ಹೂವುಗಳ, ಕೀಟಗಳ ಚಿತ್ರ ಬಿಡಿಸುವುದು; ಬಣ್ಣ, ಸುಗಂಧದ ಬಗ್ಗೆ ಚರ್ಚೆ. |
| **1.3 ಪ್ರಾಣಿಗಳು**<br>**ಪ್ರಾಣಿಗಳು ಮತ್ತು ಅವುಗಳ ಸ್ನೇಹಿತರು**<br>ಯಾವ ಪ್ರಾಣಿಗಳು ಗುಂಪಿನಲ್ಲಿ ಚಲಿಸಲು ಇಷ್ಟಪಡುತ್ತವೆ? ಯಾವ ಪ್ರಾಣಿಗಳಿಗೆ ಸಂಕೋಚ ಇದೆ ಮತ್ತು ನಿಮ್ಮ ಬಳಿಗೆ ಬರುವುದಿಲ್ಲ? ಇತರ ಪ್ರಾಣಿಗಳ ಜೊತೆ ಆಡುವ ಮತ್ತು ಇತರ ಪ್ರಾಣಿಗಳ ಮೇಲೆ ಸವಾರಿ ಮಾಡುವ | ಮಂದೆಗಳು; ಗುಂಪಿನ ವರ್ತನೆ; ಮಾನವ- | ಅವಲೋಕನ, ಮಗುವಿನ ದಿನನಿತ್ಯ ಬದುಕಿನ | ಕಿವಿಗಳಿರುವ ಇಲ್ಲದಿರುವ; ಕೂದಲಿರುವ ಇಲ್ಲದಿರುವ ಪ್ರಾಣಿಗಳನ್ನು ಪಟ್ಟಿ ಮಾಡುವುದು ಮತ್ತು ವರ್ಗೀಕರಿಸುವುದು; ಅವುಗಳ ಚಿತ್ರ ಬಿಡಿಸುವುದು; ಅವುಗಳನ್ನು ಸ್ಪರ್ಶಿಸಿ |

| | | | |
|---|---|---|---|
| ಪ್ರಾಣಿಗಳನ್ನು ನೀವು ನೋಡಿದ್ದೀರಾ?<br><br>***ಹೂವುಗಳಿಗೆ ಯಾರು ಆಕರ್ಷಿತರಾಗುತ್ತಾರೆ?***<br>ಜೇನ್ನೊಣಗಳು/ಚಿಟ್ಟೆಗಳು ಏಕೆ ಹೂವುಗಳ ಬಳಿ ಬರುತ್ತವೆ? ಜನರು ಹೇಗೆ ಜೇನುಗೂಡಿನಿಂದ ಜೇನನ್ನು ಸಂಗ್ರಹಿಸುತ್ತಾರೆ?<br><br>***ಉದ್ದವಾದ ಅಥವಾ ಚಿಕ್ಕದಾದ ಕಿವಿಗಳು***<br>ಯಾವ ಪ್ರಾಣಿಗಳಿಗೆ ಕಿವಿಗಳಿವೆ? ಯಾವ ಪ್ರಾಣಿಗಳ ಮೈಮೇಲೆ ಕೂದಲುಗಳಿವೆ?<br><br>**1.4ಸಸ್ಯಗಳು**<br>***ಸಸ್ಯಗಳ ಬೇರುಗಳು***<br>ಎಲ್ಲ ಸಸ್ಯಗಳಿಗೂ ಬೆಳೆಯಲು ನೀರಿನ ಅಗತ್ಯವಿದೆಯೆ? ಸಸ್ಯದ ಯಾವ ಭಾಗವು | ಪ್ರಾಣಿಗಳ ಅಂತರಕ್ರಿಯೆ.<br><br>ಹೂವುಗಳಿಂದ ಜೇನು; ಜೇನುಗೂಡು ಮತ್ತು ಜೇನನ್ನು ಸಂಗ್ರಹಿಸುವ ಬಗ್ಗೆ ಮೂಲ ಕಲ್ಪನೆ.<br><br>ಕೆಲವು ಪ್ರಾಣಿಗಳಿಗೆ ಬಾಹ್ಯ ಕಿವಿ ಇರುತ್ತದೆ. ಅವುಗಳಿಗೆ ಕೂದಲೂ ಸಹ ಇರುತ್ತದೆ | ಅನುಭವ, ಗುಂಪಿನಲ್ಲಿ ಚಲಿಸುವ ಪ್ರಾಣಿಗಳ ಕತೆ, ದೃಶ್ಯಚಿತ್ರಗಳು.<br><br>ಸಿನೆಮಾ; ವಿವರಣೆಗಳುಳ್ಳ ಸಚಿತ್ರ ಕಥನಗಳು/ ಜೇನನ್ನು ಸಂಗ್ರಹಿಸುವ ಪ್ರಕ್ರಿಯೆಯ ಬಗ್ಗೆ ಜೇನು ಸಂಗ್ರಹಕಾರರೊಡನೆ ಚರ್ಚೆ.<br><br>ಪ್ರಾಣಿಗಳ ಬಗ್ಗೆ ಮಗುವಿನ ಅವಲೋಕನ, ಮಾಹಿತಿ/ವಿವರಣೆ ಮತ್ತು ಸಚಿತ್ರ ವಿವರಣೆಗಳು. | ನೋಡುವುದು.<br><br>ಅವಲೋಕನ, ಸಂಗ್ರಹಣೆ, ವಿವಿಧ ರೀತಿಯ ಬೇರುಗಳ ಚಿತ್ರಗಳನ್ನು ಬಿಡಿಸುವುದು.<br>ಕಟ್ಟಡ ನಿರ್ಮಾಣ/ ನೆಲಗಟ್ಟು/ ಗಾರೆ ಕೆಲಸದಿಂದ ಬೇರುಗಳಿಗೆ ಹೊಡೆತ ಬಿದ್ದಿರುವ ಸಸ್ಯಗಳು/ ಮರಗಳನ್ನು ಗಮನಿಸಿವುದು.<br>ಅವಲೋಕನ ಮತ್ತು *ಬೋಧಿ ವೃಕ್ಷ/ ಆಲದ* ಮರಗಳ ನೆಲದ ಮೇಲಿರುವ (ನೇತಾಡುವ) ಬೇರುಗಳನ್ನು ಹಿಡಿದುಕೊಂಡು ಜೋಕಾಲೆ ಆಡುವುದರ ಬಗ್ಗೆ ಚರ್ಚೆ.<br><br>ಬಟ್ಟೆ, ಪ್ರಾಣಿ, ಕುಂಡ ಇತ್ಯಾದಿಗಳ ಮೇಲೆ ಹೂವಿನ ವಿಶಿಷ್ಟ ಗುರುತುಗಳನ್ನು ಬಿಡಿಸುವುದು; |

| | | | |
|---|---|---|---|
| ಮಣ್ಣಿನಿಂದ ನೀರನ್ನು ಹೀರಿಕೊಳ್ಳುತ್ತದೆ? ನೀವು ಹುಲ್ಲನ್ನು ಎಳೆದರೆ ಅದು ಏಕೆ ಸುಲಭವಾಗಿ ಬರುವುದಿಲ್ಲ? | | | ಹೂವುಗಳ ಅಲಂಕಾರವನ್ನು ಮಾಡುವುದು; |
| ಸಸ್ಯಗಳಾಗಲಿ ಮರಗಳಾಗಲಿ ಏಕೆ ಜೋರಾಗಿ ಗಾಳಿಬೀಸಿದಾಗ ಬುಡಸಮೇತ ಬೀಳುವುದಿಲ್ಲ? ಏನೂ ಬೆಳೆಯದಿರುವ ಬರಗಾಲದ ಸಮಯದಲ್ಲಿ ಜನರು ಯಾವ ಬೇರನ್ನು ತಿಂದು ಬದುಕುತ್ತಾರೆ? | ಸಸ್ಯಗಳಿಗೆ ನೀರು ಬೇಕು; ಬೇರುಗಳು ನೀರನ್ನು ಹೀರುತ್ತವೆ ಮತ್ತು ನೆಲದಲ್ಲಿ ಹಿಡಿದಿಟ್ಟು ಕೊಂಡಿರುತ್ತವೆ. ಕ್ಯಾರೆಟ್, ಮೂಲಂಗಿ, ಸಿಹಿ ಗೆಣಸು ಜನರು ಸಾಮಾನ್ಯವಾಗಿ ಮತ್ತು ಬರಗಾಲದಲ್ಲಿ ತಿನ್ನುವ ಬೇರುಗಳು. ಕೆಲವು ಸಸ್ಯಗಳ ವೈಮಾನಿಕ ಬೇರುಗಳು (ನೆಲದ ಮೇಲೆ ನೇತಾಡುವ ಬೇರುಗಳು) . | ಮಗುವಿನ ಅವಲೋಕನ, ಜನರು ತಿನ್ನುವ ಬೇರುಗಳ ಬಗ್ಗೆ ಮಾಹಿತಿ; ಬೇರುಗಳ ನಮೂನೆಗಳು ಮತ್ತು ಚಿತ್ರಗಳು. | ಹೂವುಗಳನ್ನು ಮತ್ತು ಮೊಗ್ಗುಗಳನ್ನು ಗಮನಿಸುವುದು, ಅವುಗಳ ನಡುವೆ ಹೋಲಿಕೆ ಮತ್ತು ವ್ಯತ್ಯಾಸಗಳನ್ನು ಗುರುತು ಮಾಡಿ ಕೊಳ್ಳುವುದು; ವಿವಿಧ ಹೂವುಗಳನ್ನು ಅವ ಲೋಕಿಸುವುದು/ ಮೂಸಿ ನೋಡುವುದು ಮತ್ತು ಸ್ಪರ್ಶಿಸಿ ನೋಡುವುದು. |
| ***ಹೂವುಗಳು*** ನಮ್ಮ ಸುತ್ತಮುತ್ತ ಇರುವ ಯಾವ ಸಸ್ಯಗಳಲ್ಲಿ ಹೂವುಗಳಿವೆ? ಅವು ವರ್ಷದ ಕೆಲವು ಸಮಯಗಳಲ್ಲಿ ಮಾತ್ರ ಹೂ ಬಿಡುತ್ತವೆಯೆ? ಮೊಗ್ಗು ಹೇಗೆ ಹೂವಿಗಿಂತ ಭಿನ್ನವಾಗಿದೆ? ಆಕಾರ, ಬಣ್ಣ, ದಳಗಳು , ಸುವಾಸನೆ ಇತ್ಯಾದಿಗೆ ಸಂಬಂಧಿಸಿದಂತೆ ನಾವು ನೋಡಿರುವ ವಿವಿಧ ರೀತಿಯ ಹೂವುಗಳಾವುವು? ನಾವು ಹೂವುಗಳನ್ನು ಯಾವುದಕ್ಕೆ ಬಳಸುತ್ತೇವೆ? ನೀವು ಯಾವುದಾದರೂ ಹೂವನ್ನು ತಿನ್ನುತ್ತೀರಾ? ಬಟ್ಟೆಗಳ,ಗೋಡೆಗಳ, ನೆಲಗಳ, ಕುಂಡಗಳ, ಮತ್ತು ಪ್ರಾಣಿಗಳ ಮೇಲೆ ಬಿಡಿಸಿರುವ ಹೂವುಗಳ | ಹೂ ಬಿಡುವ ಗಿಡಗಳು; ಋತುಮಾನಗಳು; ಮೊಗ್ಗುಗಳು ಹೂವಾಗಿ ಅರಳುವುದನ್ನು ಅವಲೋಕಿ ಸುವುದು; ಹೂವುಗಳ ವಿವಿಧ ಆಕಾರಗಳು, | ಮಗುವಿನ ಅವಲೋಕನ, ಹೂಗಳ ಬಗ್ಗೆ ಕತೆಗಳು / ಪದ್ಯಗಳು, ಹತ್ತಿರದ ಹೂದೋಟಕ್ಕೆ ಭೇಟಿ ಕೊಡುವುದು. |  |

| | | | |
|---|---|---|---|
| ವಿಶಿಷ್ಟ ಗುರುತುಗಳನ್ನು ನೋಡಿದ್ದೀರಾ?<br>ನಮ್ಮ ಪ್ರದೇಶದಲ್ಲಿ ಯಾರು ಹೂವನ್ನು ಮಾರುತ್ತಾರೆ? ಅವು ಎಲ್ಲಿಂದ ಬರುತ್ತವೆ? ಹೂವುಗಳನ್ನುಹೇಗೆ ಮಾರಾಟ ಮಾಡಲಾಗುತ್ತದೆ? ಎಷ್ಟು ಬೆಲೆಗೆ? | ಬಣ್ಣಗಳು, ದಳಗಳು ಮತ್ತು ಸುಗಂಧ ಇತ್ಯಾದಿ. ದಿನನಿತ್ಯ ಮತ್ತು ಹಬ್ಬ ಇತ್ಯಾದಿಗಳಲ್ಲಿ ಉಪಯೋಗಿಸುವ ಹೂವುಗಳು. ಬಟ್ಟೆ, ಪ್ರಾಣಿ, ಕುಂಡ, ಗೋಡೆ ಇತ್ಯಾದಿಗಳ ಮೇಲೆ ಬಿಡಿಸುವ ಹೂವುಗಳ ವಿಶಿಷ್ಟ ಗುರುತುಗಳು ಮತ್ತು ವಿನ್ಯಾಸ ಗಳು. | ಹೂ ಮಾರುವವರು ಮತ್ತು ಹೂದೋಟದ ಮಾಲಿಗಳ ಜೊತೆ ಮಾತ ನಾಡುವುದು, ಇತ್ಯಾದಿ. | ನೆರೆಹೊರೆ ಯಲ್ಲಿರುವ ಸಾಮಾನ್ಯವಾದ ಮರಗಳನ್ನು ಪಟ್ಟಿ ಮಾಡುವುದು; ಮರಗಳ ಒಡೆತನದ ಬಗ್ಗೆ ಚರ್ಚೆ; ನಾವು ತಿನ್ನದೆ ಇರುವ ಹಣ್ಣುಗಳು. |
| ***ಮರಗಳು ಯಾರಿಗೆ ಸೇರುತ್ತವೆ?***<br>ನಿಮ್ಮ ಸುತ್ತಮುತ್ತ ಇರುವ ಯಾವ ಸಸ್ಯ/ಮರಗಳನ್ನು ಜನರು ನೋಡಿಕೊಳ್ಳುತ್ತಾರೆ - ಅವರು ಯಾರು? ಯಾವುದನ್ನು ಯಾರೂ ನೋಡಿಕೊಳ್ಳುವುದಿಲ್ಲ? ಅವು ಯಾರಿಗೆ ಸೇರಿವೆ? ಕಾಡಿನಲ್ಲಿ ಬೆಳೆಯುವ ಮರಗಳ ಹಣ್ಣನ್ನು ಯಾರು ತಿನ್ನುತ್ತಾರೆ? | ಸ್ಥಳೀಯ ಹೂ ಮಾರುವವರ ಪರಿಚಯ ವಿರುವುದು; ಸ್ಥಳೀಯವಾಗಿ ಹೂಗಳನ್ನು ಅಳೆಯುವ ಘಟಕದ ಬಗ್ಗೆ (ಮೊಳ, ಮಾಲೆ, ಒಂದು ದಂಟು ಇತ್ಯಾದಿ ) ಮತ್ತು ಬೆಲೆಯ ಬಗ್ಗೆ ಒಂದು ಕಲ್ಪನೆ. | | ಆಹಾರವನ್ನು ಕೊಡುತ್ತವೆ ಎಂದು ಮಕ್ಕಳಿಗೆ ತಿಳಿದಿರುವ ಸಸ್ಯಗಳ ಪಟ್ಟಿ ಮಾಡುವುದು; ನಮೂನೆಗಳನ್ನು ತರುವುದು; ಸಾಮಾನ್ಯವಾಗಿ ಬಳಸುವ ಸಂಬಾರ ಪದಾರ್ಥಗಳು, ನಮೂನೆಗಳನ್ನು ಅವಲೋಕಿ ಸುವುದು ಮತ್ತು ಚಿತ್ರ ಬಿಡಿಸುವುದು, ವಾಸನೆ ಮತ್ತು ರುಚಿಯ ಆಧಾರದ ಮೇಲೆ ಅವುಗಳನ್ನು ಗುರುತಿಸುವುದು. |
| 2. **ಆಹಾರ**<br>***ನಾವು ಹೇಗೆ ನಮ್ಮ ಆಹಾರವನ್ನು*** | ನೆರೆಹೊರೆ ಮತ್ತು ಅಲ್ಲಿನ ಸಸ್ಯಗಳು; ಕಾಡಿನಲ್ಲಿ ಬೆಳೆದವು ಮತ್ತು ಮನೆಯಲ್ಲಿ ಬೆಳೆಸಿದವುಗಳು; ಕಾಡಿನಲ್ಲಿ ವಾಸಿಸುತ್ತಿರುವ | ಮನೆಯಲ್ಲಿ ಬೆಳಸಿದ ಮತ್ತು ಕಾಡಿನ ಸಸ್ಯಗಳ ಬಗ್ಗೆ ಇರುವ ಸ್ಥಳೀಯ ಜ್ಞಾನ, ಮಾಹಿತಿ | ಸಮುದಾಯ ಭೋಜನವಿರುವ ಸಮಾರಂಭಗಳ ಕುರಿತು ಚರ್ಚೆ; ವಿಭಿನ್ನ ಸಂದರ್ಭಗಳಲ್ಲಿ |

| | | | |
|---|---|---|---|
| ***ಪಡೆದುಕೊಳ್ಳುತ್ತೇವೆ?*** ಆಹಾರ ನಮ್ಮಲ್ಲಿಗೆ ಹೇಗೆ ಬರುತ್ತದೆ? ಅದನ್ನು ಯಾರು ಬೆಳೆಯುತ್ತಾರೆ? ತರಕಾರಿ ಮತ್ತು ಹಣ್ಣುಗಳನ್ನುಬೆಳೆಯುವದನ್ನು ನೀವು ನೋಡಿದ್ದೀರಾ? ನೀವು ಭತ್ತ/ಗೋಧಿ/ಬೇಳೆ ಇತ್ಯಾದಿಗಳ ಸಸ್ಯಗಳನ್ನು ನೋಡಿದ್ದೀರಾ? ನಿಮಗೆ ಗೊತ್ತಿರುವ ಸಂಬಾರ ಪದಾರ್ಥಗಳಾವುವು? ಯಾವ ಸಂಬಾರ ಪದಾರ್ಥಗಳನ್ನು ನಾವು ವಾಸನೆ ಅಥವಾ ರುಚಿಯ ಮೂಲಕ ಗುರುತಿಸಬಹುದು?<br><br>***ವಿಶೇಷ ಸಂದರ್ಭಗಳು*** ಬಹಳಷ್ಟು ಜನರು ಯಾವಾಗ ಒಟ್ಟಿಗೆ ಕುಳಿತು ತಿನ್ನುತ್ತಾರೆ? ಯಾವ ಆಹಾರವನ್ನು ತಿನ್ನಲಾಗುತ್ತದೆ? ಯಾರು ಅಡುಗೆ ಮಾಡುತ್ತಾರೆ? ಅದನ್ನು ಹೇಗೆ ಬಡಿಸಲಾಗುತ್ತದೆ? ಶಾಲೆಯಲ್ಲಿ ನಿಮಗೆ ಬಿಸಿಯೂಟ ಸಿಗುತ್ತದೆಯೆ? – ಯಾವುದೆಲ್ಲಾ ತಿನಿಸುಗಳು ಇರುತ್ತದೆ? ಬಿಸಿಯೂಟವನ್ನುಯಾರು ಒದಗಿಸುತ್ತಾರೆ? | ಜನರು ತಿನ್ನುವ ಹಣ್ಣುಗಳು. ಮರಗಳನ್ನು ಕಡಿಯುವುದು.<br><br>ಹೊಲದಿಂದ *ಮಂಡಿ*ಯವರೆಗೆ – ಮಾರುಕಟ್ಟೆಯಿಂದ ಮನೆಯವರೆಗೆ; ರೈತರು ಬೆಳೆದದ್ದು; ಹಣ್ಣು ಮರಗಳು, ತರಕಾರಿಗಳು, ದವಸಗಳು, ಧಾನ್ಯಗಳು, ಎಣ್ಣೆ ಬೀಜಗಳು; ಸಂಬಾರ ಪದಾರ್ಥಗಳು.<br><br>ಸಮುದಾಯ ಭೋಜನ; ಬಿಸಿಯೂಟ (ಅನ್ವಯವಾಗುವ ಕಡೆ). ಹಬ್ಬಗಳು/ ಕುಟುಂಬದ ಉತ್ಸವ ಆಚರಣೆಗಳು / | (ಎನ್ ಬಿ ಟಿ ಪುಸ್ತಕಗಳು).<br><br>ತರಕಾರಿ ಮಾರುವವರ/ ಮಂಡಿಯಲ್ಲಿನ ಸಗಟು ವ್ಯಾಪಾರಿ/ಆಹಾರ ಪದಾರ್ಥಗಳನ್ನು ಸಾಗಿಸುವ ಲಾರಿ ಚಾಲಕ ಅವರೊಂದಿಗೆ ಚರ್ಚೆ.<br><br>ಗುರುದ್ವಾರಗಳಲ್ಲಿ ಏರ್ಪಡಿಸಲಾಗುವ ಲಂಗರ್ (ಮುಕ್ತ ಭೋಜನ ಕೂಟ) ಮತ್ತು ಅಂತಹ ಕೂಟಗಳಿಗೆ ಭೇಟಿ, ಅಂತಹ ಸಂದರ್ಭಗಳಲ್ಲಿ ಅಡುಗೆ ಮಾಡುವವರೊಂದಿಗೆ | ತಿನ್ನಲಾಗುವ ವಿವಿಧ ಆಹಾರಗಳ ಪಟ್ಟಿ ಮಾಡುವುದು; ಅಂತಹ ಸಂದರ್ಭಗಳಲ್ಲಿ ಬಳಸಲಾಗುವ ದೊಡ್ಡ ಪಾತ್ರೆಗಳ ಚಿತ್ರ ಬಿಡಿಸುವುದು ಮತ್ತು ವಿವರಣೆ ಕೊಡುವುದು.<br><br>ಒಬ್ಬರು ಇನ್ನೊಬ್ಬರ ಹಲ್ಲುಗಳನ್ನು, ನಾಲಿಗೆಯನ್ನು ಮತ್ತು ಬಾಯಿಯನ್ನು ಅವಲೋಕಿಸುವುದು; ಹಲ್ಲುಗಳನ್ನು ಎಣಿಸುವುದು; ಚಿತ್ರ ಬಿಡಿಸುವುದು; ವಿವಿಧ ಪದಾರ್ಥಗಳ ರುಚಿ ನೋಡುವ ಪ್ರಯೋಗಗಳು.<br><br>ವಿವಿಧ ಪ್ರಾಣಿ/ಪಕ್ಷಿಗಳ ಕೊಕ್ಕು/ಪಂಜ/ ಹಲ್ಲುಗಳನ್ನು ಗಮನಿಸುವುದು ಮತ್ತು ಚಿತ್ರ ಬಿಡಿಸುವುದು. |

| | | | |
|---|---|---|---|
| ***ನಾಲಿಗೆ ಮತ್ತು ಹಲ್ಲುಗಳು***<br>ವಿವಿಧ ಆಹಾರಗಳನ್ನು ನಾವು ಹೇಗೆ ಸ್ವಾದಿಸುತ್ತೇವೆ? ನಾವು ತಿನ್ನಲು ಹಲ್ಲುಗಳು ಹೇಗೆ ಸಹಾಯ ಮಾಡುತ್ತವೆ – ಎಲ್ಲ ಹಲ್ಲುಗಳೂ ಒಂದೇ ರೀತಿ ಇವೆಯೆ? ಬಿದ್ದು ಹೋಗಿರುವ ನನ್ನ ಹಲ್ಲುಗಳಾವುವು ಮತ್ತು ಹೊಸ ಹಲ್ಲುಗಳು ಅದಕ್ಕಿಂತ ಹೇಗೆ ಭಿನ್ನವಾಗಿವೆ?<br><br>***ಹಲ್ಲುಗಳು, ಕೊಕ್ಕುಗಳು ಮತ್ತು ಪಂಜಗಳು***<br>ಇತರ ಪ್ರಾಣಿಗಳ ಹಲ್ಲುಗಳು ನಮ್ಮ ಹಲ್ಲುಗಳ ಹಾಗೆಯೆ ಇವೆಯೆ? ಪಕ್ಷಿಗಳ ಕೊಕ್ಕುಗಳನ್ನು ನೋಡಿ ಅವು ಏನನ್ನು ತಿನ್ನುತ್ತವೆ ಎಂದು ನಾವು ಹೇಳಬಹುದೆ? ಹಕ್ಕಿಗಳ ಪಂಜಗಳೂ ಕೂಡ ವಿಭಿನ್ನವಾಗಿವೆಯೆ? ಅವುಗಳ ಆಕಾರವು ಅವು ಸೇವಿಸುವ ಆಹಾರಕ್ಕೆ ಸಂಬಂಧಿಸಿವೆಯೆ?<br><br>3. **ವಸತಿ**<br>***ಮನೆಗಳು ಆಗ ಮತ್ತು ಈಗ***<br><br>ನಿಮ್ಮ ಅಜ್ಜಅಜ್ಜಿಯರು ವಾಸ ಮಾಡುತ್ತಿದ್ದಂತಹ ಅದೇ ರೀತಿ | ಸಮಾರಂಭಗಳು ಇತ್ಯಾದಿ ವಿಶೇಷ ಸಂದರ್ಭಗಳಲ್ಲಿ ಆಹಾರದಲ್ಲಿರುವ ಸಾಂಸ್ಕೃತಿಕ ವೈವಿಧ್ಯತೆ. ಬೋರ್ಡಿಂಗ್ ಸ್ಕೂಲು.<br><br>ರುಚಿ, ನಾಲಿಗೆ; ಹಲ್ಲುಗಳು – ವಿಧಗಳು, ಹಾಲು ಹಲ್ಲು, ಶಾಶ್ವತ ಹಲ್ಲುಗಳು. ನಾಲಿಗೆ ಮತ್ತು ಮಾತು.<br><br>ಕೆಲವು ಸಾಮಾನ್ಯ ಪ್ರಾಣಿಗಳಲ್ಲಿರುವ ಹಲ್ಲುಗಳು; ಪಕ್ಷಿಗಳ ಕೊಕ್ಕು ಮತ್ತು ಪಂಜಗಳು – ಅವು ತಿನ್ನುವ ಆಹಾರಕ್ಕಿರುವ ಸಂಬಂಧ . | ಮಾತುಕತೆ. ಹಾಸ್ಟೆಲ್/ರೈಲ್ವೆ ಪ್ಯಾಂಟ್ರಿ ಆಹಾರದ ಬಗ್ಗೆ ಕಥನಗಳು.<br><br>ವಿವಿಧ ಆಹಾರ ಪದಾರ್ಥಗಳ ನಮೂನೆಗಳು; ಸಮವಯಸ್ಕರ ಅವಲೋಕನಗಳು; ಹಲ್ಲುಗಳ ಚಿತ್ರಗಳು ಅಥವಾ ಮಾದರಿಗಳು.<br><br>ಕೆಲವು ಪ್ರಾಣಿ ಗಳನ್ನು ಅವಲೋಕಿಸಲು ಹೋಗುವುದು; ವೈಯಕ್ತಿಕ ಅನುಭವಗಳು; ದೃಶ್ಯಚಿತ್ರಗಳು; (ಪಕ್ಷಿಗಳ ಬಗ್ಗೆ ಎನ್ ಬಿ ಟಿ ಪುಸ್ತಕಗಳು). | ಮನೆಗಳ ಮಾದರಿಗಳನ್ನು ಮಾಡುವುದು; ಮನೆಗಳನ್ನು ಕಟ್ಟಲು ಉಪಯೋಗಿಸುವ ವಸ್ತುಗಳನ್ನುಸಂಗ್ರಹಿಸುವುದು. ಹಳೆ ಮತ್ತು ಹೊಸ ಕಟ್ಟಡಗಳ ಚಿತ್ರಗಳನ್ನು ಬಿಡಿಸುವುದು.<br><br>ಕಸ, ತ್ಯಾಜ್ಯವೆಂದು ಎಸೆಯಲಾದ ವಸ್ತುಗಳ ಪಟ್ಟಿಯನ್ನು ಮಾಡುವುದು. ತ್ಯಾಜ್ಯ ವಸ್ತುಗಳನ್ನು ಕಡಮೆ ಮಾಡುವುದುರ ಬಗ್ಗೆ ಚರ್ಚೆ.<br><br>ಚರ್ಚೆ, ಪ್ರಾಣಿಗಳ ಆವಾಸಸ್ಥಾನ |

